# ಸಿದ್ಧಗಂಗಾ

ಸಂಪುಟ–೨೧ ಸಂಚಿಕೆ–೫ ಮೇ, ೧೯೮೫

## ಶ್ರೀ ಸಿದ್ಧಗಂಗಾ ಸುಪ್ರಭಾತ

ಏಳು ಸಿದ್ಧರ ಬೀಡೆ, ಏಳು ಸೈಪಿನ ಗೂಡೆ,
ಬಾಲ ಸೂರ್ಯನು ಮೂಡಿ ಬೆಳಕಾಯಿತು,
ಏಳು ಪುಣ್ಯದ ಬಿತ್ತೆ ಸಿದ್ಧಗಂಗಾ ಶ್ರೀಯೆ
ಏಳು ಬೆಳಕಿನ ಬಿತ್ತೆ ಬೆಳಗಾಯಿತು ॥

* * *

ಉದ್ದಾನ ಶಿವಯೋಗಿ ತಿದ್ದಿ ಮಾಡಿದ ಮೂರ್ತಿ
ಉದ್ದಾನು ಜ್ಞಾನಿಯು ವಿರತ ಶ್ರೇಷ್ಠ ।
ಸದ್ಧೇಯು ರತಿ ಸುಗುಣ ಸಂತತಿಯು ಮೈದಳೆದು
ಉದ್ಧರಿಸ ಬಂದಿರುವ ನಿಷ್ಠ ಗರಿಷ್ಠ ॥

* * *

ಹಿಮಗಿರಿಯ ಎತ್ತರವು ಆಗಸದ ಬಿತ್ತರವು
ರಮಣೀಯ ಸಮ್ಮಿಳನ ಪಡೆದ ಹಾಗೆ।
ಶಮೆ ದಮೆಯು ಸಮದೃಷ್ಟಿ ಶಿವಭಾವ ಸುವಿವೇಕ
ವಿಮಲ ಕಾಯುವ ಧರಿಸಿ ದುಡಿದ ಹಾಗೆ॥

—ಡಾ॥ ಸಿದ್ಧಯ್ಯ ಪುರಾಣಿಕ

# ಸಿದ್ಧಗಂಗಾಂತರಂಗ



# ಶ್ರೀವಾಣಿ

ಕಾಲ ಅತ್ಯಮೂಲ್ಯವಾದದ್ದು. ಆದಕ್ಕಾಗಿಯೇ "ಮುತ್ತು ಕಳೆದರೆ ಸಿಕ್ಕೀತು ಹೊತ್ತು ಕಳೆದರೆ ಸಿಕ್ಕೀತೆ"? ಎಂಬುದಾಗಿ ತಿಳಿದವರು ಪ್ರಶ್ನಿಸಿದ್ದಾರೆ ಸಮಯ ಹೇಗೆ ಬೆಲೆಬಾಳತಕ್ಕದ್ದೋ ಹಾಗೇ ಏಕರೀತಿಯದೂ ಆಗಿದೆ. ಅಂದರೆ ವಿದ್ಯಾರ್ಥಿಗಳಿಗೆ ಪರೀಕ್ಷಾ ಸಮಯ ಮಾತ್ರ ಅತ್ಯಮೂಲ್ಯವಾದುದು; ವರ್ಷಾವಧಿಯ ಉಳಿದ ಸಮಯ ಮಹತ್ವದ್ದಲ್ಲ, ಎಂಬುದು ತಪ್ಪು ಅಭಿಪ್ರಾಯವಾಗಿರುತ್ತದೆ. ಎಲ್ಲ ಸಮಯವೂ ಏಕರೀತಿಯ ಮೌಲ್ಯ ಅಥವಾ ಮಹತ್ವವುಳ್ಳದ್ದು. ಆದರೆ ಇಂದಿನ ಬಹುತೇಕ ವಿದ್ಯಾರ್ಥಿಗಳ ಧೋರಣೆ ಇದಕ್ಕೆ ವಿರುದ್ಧವಾದುದು. 'ಯುದ್ಧಕಾಲೇ ಶಸ್ತ್ರಾಭ್ಯಾಸ'; ಎಂಬುದು ಇಂದಿನ ವಿದ್ಯಾರ್ಥಿಗಳ ಮನೋಭಾವವಾಗಿದೆ. ಈ ವಿಚಾರವು ಕೇವಲ ವಿದ್ಯಾರ್ಥಿ ಸಮುದಾಯಕ್ಕೆ ಸೀಮಿತವಲ್ಲ, ಎಲ್ಲ ಬಗೆಯ ಮತ್ತು ಎಲ್ಲ ವರ್ಗದ ಜನರಲ್ಲಿಯೂ ಈ ಭಾವನೆ ಬಂದಿರುವುದು ಖೇದಕರ. ಅತ್ಯಮೂಲ್ಯವಾದ ಸಮಯವನ್ನು ಸದುಪಯೋಗಪಡಿಸಿಕೊಳ್ಳಲಿ, ಬಿಡಲಿ ಅದು ನಮ್ಮ ಪಾಲಿಗೆ ಎಂದೆಂದಿಗೂ ವ್ಯಯವಾಯಿತೆಂದೇ ತಿಳಿಯಬೇಕು. ಸದ್ವಿನಿಯೋಗವಾದಾಗ ಮಾತ್ರ ಅದಕ್ಕೆ ಸಾರ್ಥಕತೆ; ಇಲ್ಲವಾದಲ್ಲಿ ಅದು ವ್ಯಯವಾದಂತೆಯೇ ಸರಿ. ಹಣ ಖರ್ಚಾದರೆ ಪುನಃ ಆರ್ಜಿಸಬಹುದು, ಆದರೆ ಕ್ಷಣ ಜಾರಿದರೆ ಅದು ಪುನರಾಗಮಿಸದು, ನಮ್ಮ ನಿತ್ಯದ ಚಿಂತನೆ ಕಾಲದ ಸದುಪಯೋಗವಾಯಿತೇ? ಅಥವಾ ಇಲ್ಲವೇ? ಎಂಬುದಾದರೆ ಮಾತ್ರ ಕಾಲದ ಬೆಲೆ ಅರಿಯಲು ಸಾಧ್ಯವಾಗುತ್ತದೆ. ಪ್ರತಿ ಕ್ಷಣವನ್ನೂ ಸದುಪಯೋಗಪಡಿಸಿಕೊಳ್ಳಲು ಸಹಾಯಕವಾಗುತ್ತದೆ. ಒಂದೇ ಸಮಯದಲ್ಲಿ ಒಬ್ಬ ವ್ಯಕ್ತಿ ಮಹತ್ಕಾರ್ಯವನ್ನೆಸಗುತ್ತಾನೆ, ಅವನಿಗೆ ಯಶಸ್ಸಿನ ಫಲ ದೊರೆಯುತ್ತದೆ. ಇನ್ನೊಬ್ಬ ದುಷ್ಕೃತ್ಯವೆಸಗುತ್ತಾನೆ ಮತ್ತು ಅಪಯಶಸ್ಸನ್ನು ಹೊಂದುತ್ತಾನೆ, ಮತ್ತೊಬ್ಬ ನಿಷ್ಕ್ರಿಯನಾಗಿಯೇ ಕುಳಿತಿರುತ್ತಾನೆ. ಅವನು ಲೋಕಕ್ಕೂ ಹೊರೆ; ಅಷ್ಟೇ ಏಕೆ ತನಗೆ ತಾನೇ ಹೊರೆ, ಈ ತತ್ವವನ್ನು ಅರ್ಥಮಾಡಿಕೊಂಡು ಯಶಸ್ಸಿಗಾಗಿ ಸಮಯವನ್ನು ವ್ಯಯಮಾಡಿದವನ ಕೀರ್ತಿ ಅಜರಾಮರವಾಗುತ್ತದೆಂದು ಪರಿಭಾವಿಸಿ ಜೀವನ ನಡೆಸಬೇಕು. ಇದೇ ಮನುಷ್ಯನಾಗಿ ಹುಟ್ಟಿದುದಕ್ಕೆ ಸಾರ್ಥಕ, ಉಳಿದುದೆಲ್ಲ ವ್ಯರ್ಥ, ಸಮಯ ಯಾರನ್ನೂ ಕಾಯುವುದಿಲ್ಲ. Time and tide wait for no man. ಅದು ಬಂದೇ ಬರುತ್ತದೆ ಅದರ ಸದುಪಯೋಗ ವಿವೇಕಿಗಳ ಲಕ್ಷಣ. ಜೀವನದ ಪ್ರತಿ ಕ್ಷಣವೂ ಮಹತ್ತರವಾದುದು ಎಂದು ತಿಳಿಯದ ಹೊರತು ಕಾಲದ ಸದುಪಯೋಗ ಸಾಧ್ಯವಿಲ್ಲವಾಗುತ್ತದೆ.

## "ಸಿದ್ಧಗಂಗಾ" ಮಾಸ ಪತ್ರಿಕೆ

ಶ್ರೀ ಸಿದ್ಧಗಂಗಾ ಮಠ-572104
ತುಮಕೂರು ಜಿಲ್ಲೆ.

ಪ್ರಧಾನ ಸಂಪಾದಕರು
ಪಂ॥ ಚನ್ನಪ್ಪ ಎರೇಸೀಮೆ
ಸಂಪಾದಕರು
ಹೆಚ್. ವಿ. ವೀರಭದ್ರಯ್ಯ

* * *
ಸಹ ಸಂಪಾದಕರು
ಓ. ಎಸ್. ಚಂದ್ರಶೇಖರಯ್ಯ
ಬಸವರಾಜು

* * *
ಜಾಹೀರಾತು ವಿಭಾಗ
ಎಂ. ರೇಣುಕಾರಾಧ್ಯ

* * *
ಪ್ರಸಾರ ವಿಭಾಗ
ಆರ್. ಎಸ್. ಮಲ್ಲೇಶಪ್ಪ

* * *
ಪ್ರಕಾಶಕರು
ಹೆಚ್.ಬಿ. ಗಂಗಾಧರಯ್ಯ
ಹಳೆಯ ವಿದ್ಯಾರ್ಥಿ ಸಂಘದ ಪರವಾಗಿ

* * *
ಮುದ್ರಕರು
ಶ್ರೀ ಸಿದ್ಧಲಿಂಗೇಶ್ವರ ಸ್ವಾಮಿ
ಮುದ್ರಣಾಲಯ

* * *
ಪ್ರಕಟಣೆಯ ಸ್ಥಳ
ಶ್ರೀ ಸಿದ್ಧಗಂಗಾ ಕ್ಷೇತ್ರ

### ಚಂದಾ ವಿವರ

ವಾರ್ಷಿಕ ಚಂದಾ 20-00 ರೂ
ಆಜೀವ ಸದಸ್ಯತ್ವ 201-00 ರೂ


### ಲೇಖಕರಲ್ಲಿ ಮನವಿ

'ಸಿದ್ಧಗಂಗಾ' ನಾಡಿನ ಜನತೆಗೆ ಜ್ಞಾ
ದಾಸೋಹ ವಿತರಣೆಯ ಕೆಲಸದಲ್ಲಿ ತೊ
ಗಿರುವ ಪ್ರಸಿದ್ಧ ಮಾಸಪತ್ರಿಕೆಯಾಗಿ
ಈ ಉದ್ದೇಶ ಸಾಧನೆಗಾಗಿ ನಾಡಿನ ಗ
ಲೇಖಕರಿಂದ ಸಾಹಿತ್ಯ, ಸಂಸ್ಕೃತಿ, ಕ
ಕವನ, ಕಲೆ, ವಿಜ್ಞಾನ, ಶಿಕ್ಷಣ, ರಾ
ನೀತಿ, ಧರ್ಮ, ದರ್ಶನ, ಇತಿಹಾ
ವೈಚಾರಿಕ, ಚಿಂತನ, ನಗೆಬರೆಹ, ಹರ
ಮುಂತಾದ ಲೇಖನಗಳನ್ನು ಸದಾ ಸ್ವಾ
ತಿಸುತ್ತದೆ. ಲೇಖನಗಳು ಫುಲ್ ಸ್ಕೇ
ಸೈಜಿನ ಕಾಗದದ ಒಂದೇ ಮಗ್ಗುಲ
ಸ್ಪಷ್ಟವಾಗಿ ಬರೆದಿರಬೇಕು. ಅಸ್ವೀಕ
ಲೇಖನಗಳನ್ನು ಪಡೆಯಲು ಸಾಕಷ
ಅಂಚೆಚೀಟಿಯನ್ನು ಲಗತ್ತಿಸಿರಬೇಕ
ಲೇಖನಗಳು ಅಕಸ್ಮಾತ್ ಕಳೆ
ಹೋದರೆ ಸಂಪಾದಕರು ಹೊಣೆಗಾರರ
ಲೇಖನಗಳಲ್ಲಿ ಸೂಕ್ತ ಬದಲಾವಣೆ ಮಾ
ಕೊಳ್ಳುವ ಅಧಿಕಾರ ಸಂಪಾದಕರಿಗಿ
ಈ ಬಗ್ಗೆ ಪತ್ರವ್ಯವಹಾರಕ್ಕೆ ಅವಕಾ
ವಿಲ್ಲ. ಅನುವಾದ, ರೂಪಾಂತರ ಲೇಖ
ಗಳಿಗೆ ಮೂಲ ಕೃತಿಕಾರರ ಅನುಮ
ಪಡೆದಿರಬೇಕು. ಸ್ವೀಕೃತ ಲೇಖನ
ಪ್ರಕಟಣೆಗೆ 'ಸಿದ್ಧಗಂಗಾ' ಆಗಿಂದಾ
ಸಿಗದಿ ಪಡಿಸಿರುವ ಸಂಭಾವನೆಯನ
ಕಳುಹಿಸಿಕೊಡಲಾಗುವುದು. ಸ್ಥ
ಶೀರ್ಷಿಕೆ ಪಡೆಯಲಿಚ್ಛಿಸುವ ಬರಹಗ
ರಿಗೆ ಆದ್ಯತೆ ಕೊಡಲಾಗುವುದು.

"ಸಂಪಾದಕರು"

'ಸಿದ್ಧಗಂಗಾ' ಕನ್ನಡ ಮಾಸ ಪ
ಶ್ರೀ ಸಿದ್ಧಗಂಗಾ ಕ್ಷೇತ್ರ-57210
ತುಮಕೂರು ಜಿಲ್ಲೆ.
ಇವರಿಗೆ ಕಳಿಸಿಕೊಡಬೇಕಾಗಿ ಪ್ರಾರ್ಥ

# ಸಂಪಾದಕೀಯ

## ಪರೀಕ್ಷೆಗಳು

ಶಾಲಾ ಕಾಲೇಜುಗಳು ವರ್ಷಾಂತ್ಯದಲ್ಲಿ ವಿದ್ಯಾರ್ಥಿಗಳ ಶೈಕ್ಷಣಿಕ ಅರ್ಹತೆಯನ್ನು ನಿರ್ಧರಿಸಲು ನಡೆಸುವ ವ್ಯವಸ್ಥೆ. ಹಿಂದಿನಿಂದ ನಡೆದು ಬಂದಿರುವ ಪದ್ಧತಿ. ವಿದ್ಯಾರ್ಥಿಯು ಶಿಕ್ಷಣಾವಧಿಯಲ್ಲಿ ವ್ಯಕ್ತಪಡಿಸುವ ಬೌದ್ಧಿಕ ಅರ್ಹತೆಯ ಕೊನೆಯ ಪ್ರಯತ್ನ. ಕಾಲಕಾಲಕ್ಕೆ ಅಲ್ಪ ಸ್ವಲ್ಪ ಬದಲಾವಣೆಯಾಗಿರುವುದುಂಟು. ಸದುದ್ದೇಶ ಸದಾಶಯ ಪರೀಕ್ಷೆಗಳಿಂದ ನಿರೀಕ್ಷಿಸುವ ಫಲ; ಅಷ್ಟೇ ಅಲ್ಲ. ವಿದ್ಯಾರ್ಥಿಯನ್ನು ಜೀವನದ ಸಮಸ್ಯೆಗಳಿಗೆ ಒಡ್ಡಿಕೊಳ್ಳುವಂಥ, ಪರಿಹಾರಗಳನ್ನು ಕಂಡುಕೊಳ್ಳುವಂಥ ಒಂದು ವಿಧಾನ. ಬಹಳಕಾಲ ಹಾಗೆ ನಡೆದು ಬಂದದ್ದುಂಟು. ಆದರೆ ಇಂದು ಪರೀಕ್ಷೆಗಳನ್ನು ನಡೆಸುವುದೇ ಒಂದು ಆಂತರಿಕ ಸಮರವೆಂಬಂತಾಗಿದೆ. ಒಂದು ನಿಟ್ಟಿನಲ್ಲಿ ಪ್ರಶ್ನೆಪತ್ರಿಕೆಗಳ ಗೋಪ್ಯ ಕಾಪಾಡುವ ಮಹಾ ಮಣಿಹ. ಇನ್ನೊಂದು ಕಡೆ ಅದನ್ನೂ ಭೇದಿಸುವ ಅಭಿಮನ್ಯು ಸಾಹಸ. ಎಲ್ಲಿಯೋ ಬಿರುಕು, ತೂತು ಮುಚ್ಚುವ, ಸರಿಪಡಿಸುವ ನಾಟಕ. ಪ್ರಾಮಾಣಿಕ ಪ್ರಯತ್ನ ಇಲ್ಲವೆಂದಲ್ಲ. ಅದಕ್ಕೆ ಪರಿಸರದ ಆರೋಗ್ಯದ ಕೊರತೆ. ವಿದ್ಯಾರ್ಥಿಯಂತೂ ಅಭ್ಯಾಸಕ್ಕಿಂತ, ಪ್ರಶ್ನಪತ್ರಿಕೆಯ ಅನ್ವೇಷಣೆಯ ಕಡೆಗೇ ಹೆಚ್ಚು ಒಲವು, ಸಕ್ರಿಯ ಶ್ರದ್ಧಾಭಕ್ತಿ. ಪರೀಕ್ಷಾ ಕೊಠಡಿಯಲ್ಲಿ ನಕಲು ಮಾಡುವ ಚದುರಂಗದಾಟ. ಮೇಲ್ವಿಚಾರಕ ಶತ್ರುವೆಂಬ ಭಾವನೆ. ತನ್ನ ಅರ್ಹತೆ ವಾಸ್ತವ ಜೀವನದಲ್ಲಿ ಏನಾದೀತು ಎಂಬ ಆಲೋಚನೆ ಶೂನ್ಯ. ಎಲ್ಲೋ ಅಲ್ಲೊಬ್ಬ, ಇಲ್ಲೊಬ್ಬ ನಿಷ್ಠಾವಂತ ವಿದ್ಯಾರ್ಥಿ. ಸುತ್ತ ಮುತ್ತ ರೋಗಗ್ರಸ್ಥ ಮನಸ್ಸಿನ, ಅನಾರೋಗ್ಯ ಹವ್ಯಾಸಗಳ, ಹಿಂಡು. ತನಿಖಾಧಿಕಾರಿಗಳ ಮೇಲೆ ಹಲ್ಲೆ. ಜೀವಭಯದ ಬೆದರಿಕೆ. ಪರಿಣಾಮವಾಗಿ ಪರೀಕ್ಷಾ ವ್ಯವಸ್ಥಾಪಕರಿಗೆ ತಲೆನೋವು; ಮಾನಸಿಕ ಚಿತ್ರಹಿಂಸೆ. ಪರೀಕ್ಷಾ ಕೇಂದ್ರಗಳ ರದ್ದು. ಇಷ್ಟಾಗಿಯೂ ನಿರ್ಮಲ ಮುಕ್ತ ವಾತಾವರಣ ನಿರ್ಮಿಸುವಲ್ಲಿ ವೈಫಲ್ಯ. ಏನು ಮಾಡುವುದು? ಹೇಗೆ ಇದರ ಪರಿಷ್ಕಾರ ? ಯಾರು ಇದಕ್ಕೆ ಹೊಣೆ ? ಒಂದು ಸಮಸ್ಯೆಗೆ ನೂರು ಮುಖಗಳು. ಒಂದು ಸರಿಪಡಿಸುವಲ್ಲಿ ಇನ್ನೊಂದರ ವಿಕಟ ವಿಜೃಂಭಣೆ. ಪರಿಹಾರವೆಂತು? ಆತ್ಮಶೋಧನೆ ಒಂದೇ. ಅಧಿಕಾರಿ, ಅಧ್ಯಾಪಕ, ವಿದ್ಯಾರ್ಥಿ, ಪೋಷಕ, ಸಮಾಜ, ಸರ್ಕಾರ ಎಲ್ಲರೂ ಆತ್ಮ ಶೋಧನೆ ಮಾಡಿಕೊಳ್ಳುವ ಕಾಲ. ಪ್ರಾಮಾಣಿಕರು ಈ ವರ್ಗಗಳಲ್ಲೂ ಇದ್ದಾರೆ. ಅವರಿಗೆ, ಅವರ ಪ್ರಯತ್ನಗಳಿಗೆ ಒಳಹೊರಗು ಶುದ್ಧವಾದ ಸಹಕಾರ ಕೊಡಬೇಕು. ಆಗ ಆಶಿಸಿರುವ ಫಲ ದೊರಕೀತು. ರೋಗಗ್ರಸ್ಥ

(9 ನೇ ಪುಟ ನೋಡಿ)

# ಮಾಣಿಕ್ಯ ದೀಪ್ತಿ-9

—ವಿದ್ವಾನ್ ಎಸ್. ಷಡಕ್ಷರಿ, B.Sc..M.A.Bed

ಪರಮಾತ್ಮನು ತನ್ನ ಅಪೂರ್ವ ಸೃಷ್ಟಿಯಲ್ಲಿ ಮಾನವನಿಗೆ ಅನೇಕ ಸಾಧನಗಳನ್ನು ಸನ್ನಿಹಿತಗೊಳಿಸಿದ್ದಾನೆ. ಅಂತಹ ಸಾಧನಗಳಲ್ಲಿ ಸತ್ಸಂಗತಿಯು ಒಂದು. 'ಸತ್ಸಂಗತಿ' ಎಂದರೆ ಸಜ್ಜನರ ಸಹವಾಸವೆಂತಲೂ ಅರ್ಥ.

ಈ ಸತ್ಸಂಗತಿಯಿಂದ ನೀಚ ಕೂಡ ಉನ್ನತ ಮಟ್ಟವನ್ನು ಮುಟ್ಟುತ್ತಾನೆ. ಕಲುಷಿತವಾದುದು ಗುಣ ವಿಭೂಷಿತವಾಗುತ್ತದೆ ಮೂರ್ಖನೂ ಕೂಡ ಪ್ರವೀಣನಾಗುತ್ತಾನೆ. ಒಂದು ಕೀಟವೂ ಕೂಡ ಹೂವಿನ ಸಹವಾಸದಿಂದ ದೇವತೆಗಳ ತಲೆಗೆ ಏರುವುದಿಲ್ಲವೆ? ಮಾನವನ ಆಧ್ಯಾತ್ಮಿಕ ಮತ್ತು ಲೌಕಿಕ ಜೀವನವು ಸತ್ಸಸಂಗತಿಯಿಂದಲೇ ಸಂಭವಿಸುವದು. ಏತಕ್ಕೆಂದರೆ ಮನುಷ್ಯ ಪರಿಸ್ಥಿತಿಯ ದಾಸನು, ಮತ್ತು ಸಮಾಜ ಜೀವಿಯೂ ಆದ್ದರಿಂದ ಅವನ ಮೇಲೆ ವಾತಾವರಣದ ಪ್ರಭಾವ ಸ್ವಾಭಾವಿಕವಾಗಿ ಉಂಟಾಗುತ್ತದೆ.

ಸತ್ಸಂಗತಿಯನ್ನು ಎರಡು ವಿಧವಾಗಿ ಪಡೆಯಬಹುದು. ಒಂದು ಶ್ರೇಷ್ಠ ಪುರುಷರಿಂದ ಕೂಡಿದ್ದು, ಮತ್ತೊಂದು ಶ್ರೇಷ್ಠ ಪುಸ್ತಕಗಳಿಂದ ಪಡೆಯುವಂತಹುದು. ಈ ಸಜ್ಜನರ ಸಹವಾಸವೆಂದರೆ ಹೆಜ್ಜೇನು ಸವಿದಂತೆ, ದುರ್ಗಂಧವಿರುವ ಕಡೆ ಅಪೂರ್ವ ಸುಗಂಧದ ಆನಂದ ಪ್ರಾಪ್ತವಾದಂತೆ, ಶ್ರೇಷ್ಠ ಪುಸ್ತಕಗಳನ್ನೂ ಅಧ್ಯಯನ ಮಾಡುವುದರಿಂದ ಸಜ್ಜನರ ಸಹವಾಸದಿಂದುಂಟಾಗುವ ಎಲ್ಲ ಗುಣಗಳು ಪ್ರಾಪ್ತವಾಗುತ್ತವೆ. ಆದರೆ ವ್ಯತ್ಯಾಸವಿಷ್ಟೆ ಏನೆಂದರೆ ಸಜ್ಜನರ ಸಹವಾಸದ ಪ್ರಭಾವವು ಶೀಘ್ರವಾಗಿಯೂ ಮತ್ತು ಸ್ಥಿರವಾಗಿಯೂ ಆಗುತ್ತದೆ. ಆದರೆ ಪುಸ್ತಕಗಳ ಪ್ರಭಾವ ಜೀವಂತವಲ್ಲವಾದ ಕಾರಣ ಶೀಘ್ರ ಪರಿಚಯವುಂಟು ಮಾಡುವುದಾಗಲೀ, ಸ್ಥಿರವಾಗಿ ಉಳಿಯುವದಾಗಲಿ ಆಗಲಾರದು.

ಜಾಡ್ಯಂ ಧಿಯೋಹರತಿ, ಸಿಂಚತಿವಾಚಿ ಸತ್ಯಂ
ಮನೋನ್ನತಿಂ ದಿಶತಿ, ಪಾಪಮುಪಾಕರೋತಿ।
ಚೇತಃ ಪ್ರಸಾದಯತಿ, ದಿಕ್ಷು ತನೋತಿ ಕೀರ್ತಿಂ
ಸತ್ಸಂಗತಿಃ ಕಥಯ ಕಿಂ ನ ಕರೋತಿ ಪುಂಸಮ್ ॥

ಸತ್ಸಂಗತಿಯು ಬುದ್ಧಿಯ ಜಡತ್ವವನ್ನು ಹೋಗಲಾಡಿಸುತ್ತದೆ, ಮಾತಿನಲ್ಲಿ ಸತ್ಯವನ್ನು ಚಿಮುಕಿಸುತ್ತದೆ, ಗೌರವವನ್ನು ಹೆಚ್ಚಿಸುತ್ತದೆ, ಪಾಪವನ್ನು ದೂರಮಾಡುತ್ತದೆ, ಮನಸ್ಸನ್ನು ಪ್ರಸನ್ನಗೊಳಿಸುತ್ತದೆ, ಎಲ್ಲ ದಿಕ್ಕುಗಳಲ್ಲಿಯೂ ಕೀರ್ತಿಯನ್ನು ಹರಡುತ್ತದೆ, ಸಜ್ಜನ ಸಹವಾಸಕ್ಕೆ ಸಮಾನವಾದುದು ಈ ಪ್ರಪಂಚದಲ್ಲಿ ಯಾವ

ವಸ್ತುವೂ ಇರಲಾರದು ಎಂದು ಹೇಳಿದರೆ ತಪ್ಪಾಗಲಾರದು. ಸತ್ಸಂಗವಿಲ್ಲದೆ ಆತ್ಮೋನ್ನತಿ ಅಸಂಭವ. ವ್ಯಕ್ತಿಯು ಹೇಗೆ ಇರಲಿ, ಏನೇ ಆಗಿರಲಿ, ಸಜ್ಜನರ ಸಹವಾಸದಿಂದ ಲೌಕಿಕ ಮತ್ತು ಪಾರಲೌಕಿಕ ಸುಖ ಪ್ರಾಪ್ತವಾಗುತ್ತದೆ. ಜ್ಞಾನವೃಷ್ಠಿಗೋಸ್ಕರ ಸತ್ಸಂಗತಿಯು ' ಕಲ್ಪವೃಕ್ಷಕ್ಕೆ ಸಮಾನವಾದುದು. ನಿರಾಶನಾದ ಅರ್ಜುನನಿಗೆ ಯುದ್ಧದಲ್ಲಿ ತನ್ನ ಸಂಬಂಧಿಗಳನ್ನು ಕಂಡು ಏನು ಮಾಡಬೇಕೆಂದು ತೋಚದಹಸಾದಾಗ, ಒಂದು ವೇಳೆ ಶ್ರೀಕೃಷ್ಣನ ಸಹವಾಸವಿಲ್ಲವಾಗಿದ್ದರೆ ಧರ್ಮ ಸಂಸ್ಥಾಪನೆಯಾಗುತ್ತಿತ್ತೆ? ಜಾಂಬುವಂತ ಮತ್ತು ಹನುಮಂತ ರಾಮನ ಸತ್ಸಂಗದಿಂದ ಶ್ರೇಷ್ಠವರ್ಗದಲ್ಲಿ ಸೇರಿಸಲ್ಪಟ್ಟರು. ಆಧುನಿಕ ಯುಗದಲ್ಲಿ ಮಹಾತ್ಮಗಾಂಧಿಯವರ ಸಹವಾಸದಿಂದ ಜವಹರಾಲಾಲ್ ನೆಹರು, ಸುಭಾಸ್‌ಚಂದ್ರಬೋಸರು ಮಹಾನ್ ವ್ಯಕ್ತಿಗಳಾದರು. ಸಹವಾಸ ದೋಷದಿಂದ ಮಾನವ ಒಳ್ಳೆಯವನು ಮತ್ತು ಕೆಟ್ಟವನು ಆಗುತ್ತಾನೆ, ಸೂರದಾಸ ಕವಿಯು ತನ್ನ ಮಾತಿನಲ್ಲಿ ಹೀಗೆ ಹೇಳುತ್ತಾನೆ.

> ಸೀಪ್ ಗಯೌ ಮೋತಿಭಯಿ, ಕದಲೀ ಭಯೌಕಪೂರ್ ।
> ಅಹಿಮುಖ್ ಗಯೌ ತೋವಿಷಭಯೌ, ಸಂಗತ್‌ಕೆಫಲ ಸೂರ್ ॥

ಪರುಷಮಣಿಯ ಸ್ಪರ್ಶದಿಂದ ಕಬ್ಬಿಣವು ಚಿನ್ನವಾಗುವಂತೆ ಲೋಹರೂಪಿಯಾದ ಮೂರ್ಖಮನುಷ್ಯ ಪರುಷಮಣಿರೂಪಿಯಾದ ಸತ್ಸಂಗತಿಯಿಂದ ಬಂಗಾರರೂಪ ಮನುಷ್ಯನಾಗಿ ಹೊಳೆಯುತ್ತಾನೆ.

ಸಜ್ಜನ ಮತ್ತು ದುರ್ಜನರ ಸಹವಾಸವನ್ನು ಒಂದೇ ಮಾತಿನಲ್ಲಿ ಹೇಳುವದಾದರೆ, " ಸಾರ ಸಜ್ಜನರ ಸಂಗ ಲೇಸು ಕಂಡಯ್ಯ ದೂರ ದುರ್ಜನರ ಸಂಗ ಭಂಗ ಕಾಣ ; ಸಜ್ಜನರ ಸಂಗ ಡೊಂಕು ಬಾಳೆಯ ಹಣ್ಣಿನಂತಿರ್ಪುದು ಹಣ್ಣು ಡೊಂಕಾದರೂ ಅದರ ಸಿಹಿಯು ಡೊಂಕಾಗಿರುವುದಿಲ್ಲ ಅಲ್ಲವೆ. ಹೀಗೆ ಸತ್ಸಂಗತಿಯ ಫಲ. ದುರ್ಜನರ ಸಹವಾಸ ಕೆಂಪು ಮೆಕ್ಕೆಯ ಜೋಳದಂತಿರ್ಪುದು ಜೋಳ ಕೆಂಪಾಗಿ ಚೆನ್ನಾಗಿ ಕಂಡರು, ಬಾಯಲ್ಲಿ ಆಗಿಡರೆ ಬರಿಯ ಒಗರು, ಸಪ್ಪೆ, ಹಿಪ್ಪೆ ಮಾತ್ರ ದೊರೆಯುತ್ತದೆ. ಹೀಗೆ ದುರ್ಜನರ ಸಹವಾಸ ನಿಸ್ಸಾರವಾದುದು.

ಯಾವ ವ್ಯಕ್ತಿಯೇ ಆಗಲಿ, ಬಾಳಪಥದಲ್ಲಿ ಶ್ರೇಷ್ಠ ಸ್ಥಾನ ಪಡೆಯಬೇಕೆನ್ನುವದಾದರೆ ಸತ್ಸಂಗತಿಯನ್ನು ಹೊಂದುವದಾದರೆ ಕ್ಷೇಮವಾದೀತು.

---

(ಸಂಪಾದಕೀಯ 7 ನೇ ಪುಟದಿಂದ)

ಅಭ್ಯಾಸದಿಂದ ಆರೋಗ್ಯಕರವಾದ ಯುವ ಜನಾಂಗವನ್ನು, ಅದರಲ್ಲೂ ಸುಸಂಸ್ಕೃತ, ಶಿಸ್ತು–ಸಂಯಮಗಳ, ಶಿಕ್ಷಣವಂತ ಜನಾಂಗವನ್ನು ರೂಪಿಸುವ ಸಾಹಸ ಮರಳಲ್ಲಿ ಎಣ್ಣೆ ತೆಗೆದಂತಾದೀತು. ಜ ವಾ ಬ್ದಾ ರಿ ಯು ಳ್ಳ ಎಲ್ಲರೂ ಇತ್ತ ಚಿಂತಿಸುವಂತಾಗಬೇಕು.

# ಬಸವ ಪ್ರತಿಜ್ಞಾ

— ಟಿ. ಎನ್. ಮಹದೇವಯ್ಯ

"ಎನಗಿಂತ ಕಿರಿಯರಿಲ್ಲ. ಶಿವಭಕ್ತರಿಗಿಂತ ಹಿರಿಯರಿಲ್ಲ. ನಿಮ್ಮ ಪಾದ ಸಾಕ್ಷಿ, ಎನ್ನ ಮನಸಾಕ್ಷಿ ಕೂಡಲ ಸಂಗಮದೇವಾ ಎನಗಿದೇ ದಿಬ್ಯ"

ವಿನಯವೇ ವಿದ್ಯೆಯ ಹೆಗ್ಗುರುತು. ಎಲ್ಲರಿಗಿಂತಲೂ ಕಿರಿಯನು ನಾನು. ಎಲ್ಲರ ಸೇವಕ ನಾನು—ಎಂದು ನಡೆಯುವುದೇ ಮೋಕ್ಷ ಸಾಧನೆಯ ಮೊದಲನೆಯ ಮೆಟ್ಟಿಲು. ಆತ್ಮ ಸಾಕ್ಷಾತ್ಕಾರಕ್ಕೆ ಅಡ್ಡಬರುವ ಅಹಂಕಾರವು ಇದರಿಂದ ಅಳಿದು ಹೋಗುವುದು. ಆತ್ಮ ಪರಿಶುದ್ಧತೆಯಾಗುವುದು. ಮಹಾತ್ಮ ಗಾಂಧೀಜಿಯವರು ಹೇಳುವಂತೆ ಜಯ ಹೊಂದಲು ವಿನಯವೇ ಮೂಲ ಕಾರಣ. Humanity Is the Key to quick Success. ವಿನಯವಿಲ್ಲದವನು ಡಂಭಾಚಾರಿ, ದುರಹಂಕಾರಿ, ಅಂಥವರು ಜಗತ್ತಿನಲ್ಲಿ ಎಂದೂ ಮಹಾಪುರುಷರಾಗಲಾರರು. ಜ್ಞಾನ ಜ್ಯೋತಿಯ ಒಂದು ಕಿರಣವೂ ಅವರ ಬಳಿ ಸುಳಿಯದು. ಜಗತ್ತಿನ ಆಗು ಹೋಗುಗಳಲ್ಲಿ ಅವರ ಬಾಳುವೆಯು ಹೆಸರಿಲ್ಲದೆ ಹೋಗುವುದು. ವಿಶ್ವಪ್ರೇಮವು ಜಗತ್ತಿನ ಗುರಿ. ಅದರ ಸಂಗಡ ಸಹಕರಿಸುವ ಯೋಗ್ಯತೆ ಅವರಿಗಿಲ್ಲ. ಅದಕ್ಕಾಗಿ ಮಹಾತ್ಮಾಜಿಯವರು ನಮ್ರತೆಯಿಲ್ಲದವನು ಅದೆಂಥ ಸಹಕಾರಿ ಎಂದಿರುವರು. A non Co-operator is nothing if not humble. ವಿನಯದಿಂದ ಮನುಷ್ಯನು ಎಷ್ಟು ತಲೆಬಾಗಿ ನಡೆಯುವನೋ ಅವನು ಅಷ್ಟು ಮಹಾ ಪುರುಷನಾಗುವನು. ಗಿಡವು ತನ್ನ ವಿನಯತೆಯನ್ನು ನೆಲಕ್ಕೆ ಆಳವಾಗಿ ಬೇರು ಕಳುಹಿಸುವುದರ ಮೂಲಕ ತೋರಿಸಿದರೆ ಮೇಲೆ ಅದು ಎಷ್ಟು ಬಲವಾಗಿ ನಿಲ್ಲುವುದು ! ಅಂತೆಯೇ ಮನುಷ್ಯನ ಸ್ಥಿತಿ. ಜೀವನ ಪ್ರಕಾಶವನ್ನು ಜಗತ್ತು ಸವಿಯುವುದು ವಿನಯದಿಂದ. "ನಾನೊಬ್ಬ ಭಂಗಿ"— ಎಂದುಕೊಳ್ಳುವ ಮಹಾತ್ಮರು, ಆದರಿಂದಲೇ ಜಗದ್ವಂದ್ಯರಾಗಿರುವರು. ತಾವು ಕಿರಿಯರಾಗಲು ಮಹಾಪುರುಷರು ಪ್ರಯತ್ನಿಸುವರು. ಅದಕ್ಕಾಗಿಯೇ ಭಗವಾನ್ ರಾಮಕೃಷ್ಣ ಪರಮಹಂಸರು ಕಂಗಾಲ ಭಿಕ್ಷುಕರ ಎಂಜಲೆಲೆಯನ್ನು ಎತ್ತಿ ಹಾಕಿ ಭಗವಾನರಾದರು. ಅವರು ಮೋಕ್ಷಸಾಧನೆಗೆ ಅಡ್ಡವಾದ ಅಹಂಕಾರವನ್ನು ಕುರಿತು ಹೀಗೆಂದಿರುವರು. ಅಹಂಕಾರವು ಮೋಕ್ಷ ಶಾಸ್ತ್ರದಲ್ಲಿ ಚಿಜ್ಜಡ ಗ್ರಂಥಿಯೆನಿಸುವುದು. ಅದು ಬಿಡೆಯದನಕ ಮುಕ್ತಿ ಇಲ್ಲ. ಸಾಧನಪಥ ಸಾಗುವಾಗ ಒಮ್ಮೊಮ್ಮೆ ಸಿದ್ಧಿಗಳು ಕೈಸೇರುವುವು. ಆಗ ಮೋಹಗೊಳಿಸಿ ಎಳೆಯುವುದು ಘೋರ ನರಕಕ್ಕೆ ನಮ್ಮನೀ ಅಹಂಕಾರ. ಈಶನ ದಿಕ್ಕು ತಪ್ಪಿಸುವುದೀ ಅಹಂಕಾರ, ಹುಚ್ಚನಂತೆ ಕುಣಿಯ ಹಚ್ಚುವುದೀ ಅಹಂಕಾರ.

ಎಲ್ಲ ವೇದಾಂತಿಗಳೂ ಇದನ್ನೇ ಹೇಳುವರು, ಮಮಕಾರದಲ್ಲಿಯ ಅವಸ್ಥೆಯ ಅಳಿವಾಗುತ್ತಿರುವ ಸ್ಥಿತಿಯು ಈ ವಚನದಲ್ಲಿ ಕಂಡುಬರುತ್ತದೆ. ತನ್ನ ಹಿರಿಮೆಗೆ ತಿಲಾಂಜಲಿಕೊಡುವ ಮಹಾತ್ಮರ ಅನುಭವದ ಫಲರೂಪವಾದ ನುಡಿಗಡಣ. ಈ ಅವಸ್ಥೆಯನ್ನು ಭಗವಾನ್ ಶ್ರೀಕೃಷ್ಣನು ಹೀಗೆ ವರ್ಣಿಸಿರುವನು.

ವಿಹಾಯ ಕಾಮಾನ್ಯಃ ಸರ್ವಾನ್ಪುಮಾಂಶ್ಚರತಿ ನಿಸ್ಪೃಹಃ ।
ನಿರ್ಮಮೋ ನಿರಹಂಕಾರಃ ಸಶಾಂತಿ ಮಧಿಗಚ್ಛತಿ ॥

ಯಾವನು ಸರ್ವಕಾಮಗಳನ್ನು ಬಿಟ್ಟು ನಿಸ್ಪೃಹನಾಗಿ ಚರಿಸುವನೋ ಮತ್ತು ನಾನು ನನ್ನದು ಎಂಬ ಬುದ್ಧಿರಹಿತನಾಗುತ್ತಾನೋ ಆತನು ಶಾಂತಿಯನ್ನು ಪಡೆಯುವನು. ಲಿಂಗಾಂಗ ಸಾಮರಸ್ಯದ ಬೆಳೆ ಬೆಳೆಯಲು ಹೃದಯ ಭೂಮಿ ಫಲವತ್ತಾಗಬೇಕು. ಅದಕ್ಕೆ ವಿನಯವೂ ಶಾಂತಿಯಂತೆ ಮೂಲಸಾಮಗ್ರಿ. ಮೊದಲು ವಿನಯ ಬೇಕು. ವಿನಯದಿಂದ ಮನುಷ್ಯನಾಗುವನು, ವಿನಯದಿಂದ ದೇವನಾಗುವನು.

ಭಕ್ತಿಯೋಗಿಯಾದ ಬಸವೇಶ್ವರನು ತಾನು ಮುಟ್ಟಬೇಕಾದ ಭಕ್ತಿ ಮಂದಿರವು ಇನ್ನೂ ದೂರವಿದೆ ಎಂದುಕೊಂಡಿದ್ದಾನೆ ಜಗತ್ತಿನ ಎಲ್ಲ ಪರಮಾತ್ಮನ ಭಕ್ತರ ಭಕ್ತಿ ಗಿಂತಲೂ ನನ್ನ ಭಕ್ತಿ ಕಿರಿದಾಗಿದೆ ಎಂದು ತಲೆಬಾಗಿರುವನು ಆದರೆ ಹಿಂಜರಿದಿಲ್ಲ. ಪರಮಾತ್ಮನ ಪಾದಾರವಿಂದರಗಳಲ್ಲಿ ಶರಣು ಹೋಗಿರುವ ಭಾವವನ್ನು ವ್ಯಕ್ತಗೊಳಿ ಸಿರುವನು. ಇದೇ ಭಾವದ ಈ ವಚನಗಳನ್ನು ನೋಡಿರಿ. "ಆನು ಭಕ್ತನಲ್ಲಯ್ಯ, ಆನು ವೇಷಧಾರಿಯಯ್ಯ, ಕಾಟುಗ, ಕೆತ್ತುಗ, ಪೊಲ್ಲುಗನೆಂಬುದು ಎನ್ನ ಹೆಸರು. ಕೂಡಲ ಸಂಗಮದೇವಾ, ನಿಮ್ಮ ಶರಣರ ಮನೆಯ ಮಗನಾನಯ್ಯ" "ಡಂಬ ದಳುಹು ಎನ್ನದಯ್ಯ! ಡಂಬಕನೆಂಬುವ ನಾನಯ್ಯ; ನಿಮ್ಮ ಶರಣರ ಡಿಂಗರಿಗ ನಾನು! ಕೂಡಲ ಸಂಗಮದೇವಾ". "ಚನ್ನ ಬಾರುಮನ ಭಂಟ ನಾನಯ್ಯ! ಎನ್ನ ಚೌಂಗು ಬೊಲ್ಲನ ಕಾವ ಗೋವನೆಂಬರು. ಕೂಡಲ ಸಂಗನ ಶರಣರೊಡೆಯರಾಗಿ, ತಮ್ಮ ತೊತ್ತಿನ ಮಗನೆಂದು ಒಲಿದಂತೆ ನುಡಿವರು." "...ಬಾಗಿದ ತಲೆಯು, ಮುಗಿದ ಕೈಯ್ಯಾಗಿರಿಸು, ಕೂಡಲ ಸಂಗಮದೇವ."

ಇಂತಹ ಹೃದಯದ ಭಾವನೆಯುಳ್ಳ ಮಹಾ ಪುರುಷನ ವಿನಯದ ಮೇರೆಯನ್ನು ಕಲ್ಪಿಸುವುದೂ ಕೂಡ ಕಲ್ಪನೆಗೆ ದೂರವೇ ಉಳಿಯಿತು. ವಿನಯದಿಂದ ಮನುಷ್ಯನ ಮನಸ್ಸು ಬೆಣ್ಣೆಯಂತೆ ಮೃದುವಾಗಿ ಯಾವ ಹಾಡಿಗೆ ಬೇಕೆಂದರೆ ಆ ಹಾಡಿಗೆ ತಿರುಗಿ ಸಲು ಸಾಧ್ಯವಾಗುವುದು. ಭಕ್ತಿಯ ಅಚ್ಚಿಗೆ ಎರಕ ಹೊಯ್ಯಲು ಸುಲಭವಾಗುವುದು. ಈ ವಚನವೊಂದರಿಂದ ಬಸವೇಶ್ವರನ ನಿಜತ್ವವು ಒಡೆದು ಮೂಡಿ ನಮ್ಮೆದುರು ನಿಲ್ಲು ತ್ತದೆ. ಅವನ ಭಕ್ತಿಯ ಹಿರಿಮೆಯು ಮಹತ್ವವು ತೋರುತ್ತದೆ. ಅವನ ಸರಳ ತನವು ವ್ಯಕ್ತವಾಗುತ್ತದೆ. ಅವನ ಆತ್ಮಬಲದ ಹೊನಲುಕ್ಕಿಹರಿದ ಹಾದಿ ಕಾಣುತ್ತದೆ.

ಜಗತ್ತಿನ ಎಲ್ಲ ಜೀವಿಗಳಲ್ಲಿ ಸಮತೆಯನ್ನು ಭಾವಿಸುವನು ಮಹಾತ್ಮನೆಂದು ಶ್ರೀ ಕೃಷ್ಣಪರಮಾತ್ಮನು ಗೀತೆಯಲ್ಲಿ ನುಡಿದಿರುವನು.

ವಿದ್ಯಾವಿನಯ ಸಂಪನ್ನೇ ಬ್ರಾಹ್ಮಣೇ ಗವಿ ಹಸ್ತಿನಿ ।
ಶುನಿಚೈವ ಶ್ವಪಾಕೇಚ ಪಂಡಿತಾಃ ಸಮದರ್ಶಿನಃ ॥

ವಿದ್ಯೆ ಮತ್ತು ವಿನಯವುಳ್ಳ ಬ್ರಾಹ್ಮಣನಲ್ಲಿಯೂ, ಗೋವಿನಲ್ಲಿಯೂ, ಆನೆಯಲ್ಲಿಯೂ ನಾಯಿಯಲ್ಲಿಯೂ, ಚಂಡಾಲನಲ್ಲಿಯೂ ಸಹ ಪಂಡಿತರು ಸಮದರ್ಶಿಗಳಾಗುವರು. ಬಸವೇಶ್ವರನು ಈ ಸೀಮೆಯನ್ನು ದಾಟಿ ಬಹುದೂರ ಹೋಗಿರುವನು. ಈ ಬಗೆಯ ಭಾವನೆಗಳು ತಲೆ ಹಾಕುವುದರಿಂದ ಪ್ರಪಂಚಕ್ಕಾಗಲೀ ವೀರಶೈವ ಸಮಾಜಕ್ಕಾಗಲೀ ಪ್ರಯೋಜನವಿದೆಯೆಂದು ತೋರಿದರೆ ಬರೆಯಬಹುದು. ವಿನಯವಿಲ್ಲದ ಬ್ರಾಹ್ಮಣನು ಚಂಡಾಲನಿಗಿಂತಲೂ ಕೀಳೆಂಬ ಭಾವವನ್ನು ಶ್ರೀ ಕೃಷ್ಣನು ತೋರಿಸಿರುತಾನೆ. ವಿಶ್ವಪ್ರೇಮಿಗಳು, ಮಹಾಪುರುಷರು, ಜಗತ್ತಿನ ಸೇವಕರು, ದೈವಭಕ್ತರು, ದಾಸರು, ಬಸವೇಶ್ವರನು ಇಂತೆಂದಿರುವನು. ನನಗಿಂತಲೂ ಕಿರಿಯರಿಲ್ಲ. ದೈವಭಕ್ತರಿಗಿಂತಲೂ ಹಿರಿಯರಿಲ್ಲ, ನನ್ನ ಮನಸ್ಸಾಕ್ಷಿಯಾಗಿ. ನಿನ್ನಪಾದಸಾಕ್ಷಿಯಾಗಿ ನನಗೆ ಇದೇ ಶ್ರೇಷ್ಠ."

## ತಿರುನೀಲಕಂಠಭಕ್ತ–೧

ಶ್ರೀಮತಿ ಹೆಚ್. ಜಿ. ರಾಧಾದೇವಿ,
ನಂ. 12-1-17/4, ಬೀದೀಲುನಾಗಮ್ಮ ಮನೆ, ಗುಂಚ್‌ರಸ್ತೆ ರಾಯಚೂರು-584101

ಚೋಳದೇಶದಲ್ಲಿ ಶಿವಪುರ ಎಂಬ ಸುಂದರ ಗ್ರಾಮ. ಆ ಗ್ರಾಮದಲ್ಲಿ ತಿರುನೀಲ ಕಂಠ ಎಂಬ ಒಬ್ಬ ಪರಮ ಶಿವಭಕ್ತ ವಾಸವಾಗಿದ್ದ. ಆತನ ಪತ್ನಿಯ ಹೆಸರು ಮುತ್ತೈದೆ ದಂಪತಿಗಳಿಬ್ಬರು ಚಿಕ್ಕಪ್ರಾಯದವರು ದಾಂಪತ್ಯದಲ್ಲಿ ಸ್ವರ್ಗ ಕಾಣುವ ಶೋಡಷ ವರ್ಷ ಅವರಿಬ್ಬರದು.

ಇಷ್ಟು ಚಿಕ್ಕವಯಸ್ಸಿನವನಾದರು ಸಹ ತೀರು ನೀಲಕಂಠನ ಭಕ್ತಿ ಊರವರೆಲ್ಲ ಬೆರಗು ಪಡುವಂತಿದೆ. ಲಿಂಗಾರ್ಚನೆಗೆಂದು ಎಂದಿನಂತೆ ಆ ದಿನ ತಿರು ನೀಲಕಂಠ ಶಿವಾಲಯಕ್ಕೆ ಬಂದಿದ್ದಾನೆ.

ಶಿವನಿಗೆ ಅಭಿಷೇಕ ಮಾಡುತ್ತಿದ್ದಂತೆಯೆ ಲಿಂಗವನ್ನು ಎರಡು ಕೈಗಳಿಂದ ತಬ್ಬಿ ಹಿಡಿದು ಓ ...ನೀಲಕಂಠ ನನ್ನ ತಂದೆ__ಇಡಿ ಲೋಕ ಲೋಕಗಳನ್ನೆ ಸುಡುವ ಆ ಉಗ್ರ ಹಾಲಾಹಲನೀದೆಂತು ಕುಡಿದೆ ತಂದೆ....? ನಿನ್ನ ಹೊಳೆವ ಆ ಕೆಂಜೆಡೆಗೆ ವಜ್ರಾಭರಣಾ ನೀನು ಏಕೆ ಧರಿಸಿಲ್ಲ ದೇವಾ__ಸರ್ಪಗಳನ್ನು ಸುತ್ತಿರುವೆ.

ನಿನ್ನ ಚೆಲುವಾದ ಮುತ್ತಿನ ಬಣ್ಣದ ದೇಹಕ್ಕೆ ತಂಪಾದ ಸುಗಂಧಗಳನ್ನು

ಹಚ್ಚದೆ ಸ್ವಾಮಿ ಅದೇಕೆ ಭಸ್ಮವನ್ನು ಹಚ್ಚಿರುವೆಯೊ__? ಕೋಮಲವಾದ ನಿನ್ನ ತನು ವಿಗೆ ನುಣುಪಾದ ರೇಷ್ಮೆ ವಸ್ತ್ರಗಳುಡದೆ ಒರಟಾದ ಗಜಚರ್ಮ, ಪುಲಿಚರ್ಮ ಧರಿ ಸಿರುವೆಯಲ್ಲೊ ನನ್ನ ಪ್ರಭೂ__?

ಎಂದು ಗದ್ಗದ ಸ್ವರದಿಂದ ಹೇಳುತ್ತ ಶಿವಲಿಂಗಕ್ಕೆ ಬಗೆ ಬಗೆ ಸುಗಂಧ ಪೂರಿತ ರಸಗಂಧ ಹಚ್ಚಿ, ಮಲ್ಲಿಗೆ ಜಾಜಿ ಪುಷ್ಪ ಹಾರಗಳನ್ನು ಮಾಲೆ ಮಾಲೆಯಾಗಿ ಹಾಕಿ ರೇಷ್ಮೆಮುಡಿ ಹೊದಿಸಿದ.

ನಮಃ ಶಿವಾಯ–ನಮಃ ಶಿವಾಯ ಎನ್ನುತ್ತಾ ಅದೆಷ್ಟು ನಮಸ್ಕಾರಗಳನ್ನು ಹಾಕಿದನೊ__ಕಡೆಗೆ ಹರನಿಗೆ ಕ್ಷೀರ ನೈವೇದ್ಯಮಾಡಿ ಮನೆಗೆ ನಡೆದ.

ಶಿವಧ್ಯಾನ ಮಾಡುತ್ತ ತಿರುನೀಲಕಂಠ ಮನೆಗೆ ನಡೆದಿದ್ದಾನೆ ದಾರಿಯಲ್ಲಿ ಶಿವಾಲಯದ ದೇವದಾಸಿ ಸುಂದರಿಯ ಉಪ್ಪರಿಗೆ ಮನೆ. ಮನೆ ಸಾರಿಸಿದ ಸಗಣಿ ನೀರನ್ನು ಸುಂದರಿ ಕೆಳಗೆ ಸುರಿದಳು.

ಆ ನೀರು ತಿರುನೀಲಕಂಠನಿಗೆ ಅಭಿಷೇಕವಾಯಿತು. ನಮಃ ಶಿವಾಯ –ನಮಃ ವಾಯ ಎನ್ನುತ್ತಾ ಹಾಗೆ ಮುಂದೆ ನಡೆದ ತಿರುನೀಲಕಂಠ.

ಶಿವನಾಮ ಶಬ್ದ ಕೇಳಿ ಸುಂದರಿ ಬಗ್ಗಿ ನೋಡಿದಳು ಬೆದರಿ ಬೆಂಡಾದಳು. ಕಸ್ಮಿಕನಾಗಿ ಎಂತಹ ಅಪರಾಧ ಮಾಡಿಬಿಟ್ಟೆ! ಪರಮ ಶಿವಭಕ್ತರಾದ ತಿರುನೀಲ ಂಠಂಗೆ ನನ್ನ ಮನೆ ತೊಳೆದ ಹೊಲಸು ನೀರಿನ ಅಭಿಷೇಕ! ! ಛೆ! ಛೆ! ಕುಂಭಿ ಾಕ ನರಕ ತಪ್ಪದು ನನಗೆ _ಎಂದು ಹಲಬುತ್ತ ದಾಸಿಯರನ್ನಟ್ಟಿ ತಿರುನೀಲಕಂಠ ನ್ನು ತನ್ನ ಮನೆಗೆ ಕರೆಸಿಕೊಂಡಳು.

ತಾನೆ ಬಾಗಿಲ ಬಳಿ ಬಂದು ಪಾದಕ್ಕೆ ಬಿದ್ದು ಒಳಗೆ ಕರೆದೊಯ್ದಳು. ಮಲ್ಲಿಗೆ ಂಪಿಗೆಯ ತೈಲಗಳೊತ್ತಿ ಪರಿಮಳದ ಉಷ್ಣೋದಕ ವೆರೆದು ಅಭ್ಯಂಗನ ಮಾಡಿಸಿದಳು ೇಷ್ಮೆ ಮಡಿ ವಸ್ತ್ರ ಉಡಿಸಿ ಕೇಸರಿ ಬಾದಾಮಿ ಹಾಲು ಕುಡಿಸಿ, ರಸಬಾಳೆ, ದ್ರಾಕ್ಷಿ, ಿತ್ತಳೆ ಹಣ್ಣು ತಿನಿಸಿದಳು. ಕರ್ಪೂರ ವೀಳ್ಯವಿತ್ತಳು, ಸುಗಂಧ ಪೂರಿತ ಕಂಪಿನ ಗೆ ಬಗೆರಸಗಂಧ ತನುವಿಗೆ ಹಚ್ಚಿದಳು.

ನಮಃ ಶಿವಾಯ ಎಂದು ಶಿವಧ್ಯಾನದಲ್ಲಿ ತಲ್ಲಿನನಾಗಿ ತಾನು ಪಡೆದ ಉಪಚಾರ ಗಳನ್ನು ಶಿವಲಿಂಗಕ್ಕೆ ಮನದಲ್ಲೇ ಅರ್ಪಿಸುತ್ತಇದ್ದ ತಿರುನೀಲಕಂಠ ಅವಳಿಗೆ ಹರಿಸಿ ಅಲ್ಲಿಂದ ತನ್ನ ಮನೆಗೆ ಬಂದ. ಪತಿ ಎಂದಿನಂತೆ ಶಿವಾಲಯದಿಂದ ಹಿಂದಿರುಗಿ ಬರ ಲಿಲ್ಲ. ತಡವೇಕಾಯಿತೆಂದು ಮಿಡುಕಿ ತಿರುನೀಲಕಂಠನ ಪತ್ನಿ ಮುತ್ತೈದೆ–ತನ್ನ ದಾಸಿ ಯನ್ನು ಕಳುಹಿಸಿದಳು.

ಅವಳ ಎದುರಿಗೆ ದೇವದಾಸಿ ಸುಂದರಿಯ ಮನೆಯಿಂದ ಹೊರಬಂದ ತಿರುನೀಲ ಕಂಠ, ದಾಸಿಗೆ ಹಿಂದು ಮುಂದಿನ ಸಂಗತಿಗಳಾವುವು ಸಹಾ ಗೊತ್ತಿಲ್ಲ. ತಾನು ನೋಡಿದಷ್ಟನ್ನೆ ಮುತ್ತೈದೆಗೆ ವರದಿ ಮಾಡಿದಳು. ಅಗ್ನಿಯಲ್ಲಿ ಬಿದ್ದ ಪತಂಗದಂತೆ ಕುದ್ದು ಹೋದಳು ಮುತ್ತೈದೆ. ಮನೆಗೆ ಬಂದ ತನ್ನ ಪತಿಯನ್ನು ಕಡು ಮುನಿಸಿನಿಂದಲೆ ಎದುರು ಗೊಂಡಳು ನಿರ್ಮಲ ಚಿತ್ತದ ತಿರುನೀಲಕಂಠ ಪತ್ನಿಯನ್ನು ಎಂದಿನಂತೆ ಆದರ ದಿಂದಲೆ ಮಾತನಾಡಲೆತ್ನಿಸಿದ! ಪತಿಮೆದ್ದ ಕರ್ಪೂರ ವೀಳ್ಯ–ಆತನ ದೇಹಕ್ಕೆ ತೊಡೆದ ಸುಗಂಧ ಪರಿಮಳಗಳು ಪತ್ನಿಯಲ್ಲಿ ತಪ್ಪು ಕಲ್ಪನೆಯನ್ನು ಮಾಡಿಸಿದವು. ಕೋಪ ದಿಂದ ಭುಸುಗುಟ್ಟುತ ಪತ್ನಿ ಪ್ರತ್ಯೇಕ ಶಯ್ಯೆಯಲ್ಲಿ ಮಲಗಿದಳು. ಮಡದಿಯ ಮುನಿಸಿನ ಕಾರಣ ತಿರುನೀಲಕಂಠನಿಗೆ ಅರ್ಥವೇ ಆಗಲಿಲ್ಲ. ತಪ್ಪು ಮಾಡಿದ್ದರಲ್ಲವೆ ಅವನಿಗೆ ಅಳುಕುವುದು.

“ನೋಡು ಸತಿ– ಶಿವಮಾಯೆಯಲಿ ಈ ದಿನ ಒಂದು ವಿಚಿತ್ರ ಸಂಘಟಿಸಿತು–” ಎಂದು ಹೇಳುತ್ತಾ ಪತ್ನಿಯ ತೋಳು ಹಿಡಿದೆತ್ತಿದ. ಕಡು ಚೆಲುವೆಯಾದ ಕೆಂಪೇ

ಶಿದಕೆನ್ನೆಯು ಮುತ್ತೈದೆ ಉಕ್ಕಿಬಂದ ಕೋಪದಲ್ಲಿ ದೂರಸೆಟೆದು ಹಾರಿ ಹೊರಳುತ್ತಾ

"ನನ್ನ ಮುಟ್ಟ ಬೇಡಿ–ಮುಟ್ಟಿದರೆ ಶಿವನಾಣೆ" ಎಂದು ಬಿಕ್ಕಿ ಬಿಕ್ಕಿ ಅತ್ತಳು

ತಿರುನೀಲಕಂಠ ಧಿಗ್ಭ್ರಾಂತವಾಗಿ ದೂರ ಸರಿದ. ನಂತರ ತನ್ನ ಕಥೆ ಹೇಳಿದ. ಪ
ನಿರಪರಾಧಿಯೆಂದು ಸತಿಗೆ ಗೊತ್ತಾಯಿತು. ಆತನ ಕಾಲಿಗೆ ಎರಗಲು ಬಂದಳು.

ಆದರೆ ಬೆಂಕಿಯ ಬೊಂಬೆಯನ್ನು ಕಂಡಂತೆ ತಿರುನೀಲಕಂಠ ಹೆದರಿ ದೂ
ಸರಿದ. ಶಿವನಾಣೆ ಇಂದಿನಿಂದ ನಮ್ಮಿಬ್ಬರ ಮಧ್ಯೆ ಇದೆ–ನೀನು ನನ್ನ ಮುಟ್ಟಲಾಗದ
ಎಂದು ದೂರಕ್ಕೆ ಬಂದು ಮಲಗಿದ.

ಹದಿನಾರರ ಯೌವನದಲ್ಲೆ ಪತಿ ಪತ್ನಿಯರಲ್ಲಿ ವ್ರತ ಪ್ರಾರಂಭವಾಯಿತು. ಇ
ಬ್ಬರು ಒಬ್ಬರನ್ನೊಬ್ಬರು ಮುಟ್ಟುವಂತಿಲ್ಲ. ಶಿವನ ಭಕ್ತಿಯೆ ಇಬ್ಬರ ಬದುಕಿಗು ಆ
ಧಾರ. ಹೀಗೆ ದಿನಗಳು ಉರುಳಿತು ತಮ್ಮ ಪ್ರತಿಜ್ಞೆಯನ್ನು ಲೋಕದ ಕಣ್ಣಿಂದ
ಮುಚ್ಚಿಟ್ಟು ಒಂದೇ ಮನೆಯಲ್ಲಿ ಸಂಯಮದಿಂದಾ ಬಾಳಿದರು.

ಮುತ್ತೈದೆಯ ದುಂಬಿಯಂಥಾ ಕಪ್ಪು ಮಂಗುರುಳಾಗಲಿ ಕೆಂದ ಟಿಯಾಗಲಿ
...ಗುಲಾಬಿ ಕೆನ್ನೆಯಾಗಲಿ, ಹೊಳೆವ ಹೊಂಬಣ್ಣದ ಮಾಟವಾದ ತನುವಾಗಲಿ
ಭಕ್ತನನ್ನು ಅವನ ವ್ರತದಿಂದ ಕದಲಿಸಲಿಲ್ಲ, ಮುತ್ತೈದೆಯು ಪತಿಗನುಗುಣವಾಗಿ
ಸಂಯಮದಿಂದಲೆ ಸಂತಾನದ ಆಸೆಯನ್ನು ತಡೆದು ಬಾಳಿದಳು. ಇಬ್ಬರಿಗೂ ಈಗ
ಎಂಬತ್ತರ ಪ್ರಾಯ, ತಮ್ಮ ವ್ರತದ ಬಗ್ಗೆ ಇಬ್ಬರಿಗೂ ಪಶ್ಚಾತಾಪವಿಲ್ಲ, ಬದುಕಿನ
ಸುಖ ಅನುಭವಿಸಿಲ್ಲ ಎಂಬ ನೋವಿಲ್ಲ ಬದಲಾಗಿ ಇನ್ನು ಸಂಭ್ರಮವೆ ಇದೆ. ಶಿವ
ನಿಗೆ ಅರ್ಪಿತನಾದ ಸುಂದರ ಬದುಕು ತಮ್ಮದು ಎಂಬ ಧನ್ಯತೆ ಇದೆ. ಆದರೆ ಹೆಮ್ಮೆ
ಇಲ್ಲ. ನಿರಹಂಕಾರಿಗಳು.

ತನ್ನ ಭಕ್ತರ ಸಂಯಮ ಮೆಚ್ಚಿದ ಶಿವ ಅವರ ಭಕ್ತಿ ಲೋಕಕ್ಕೆ ತಿಳಿಯಪಡಿಸಲು
ಬಯಸಿದ. ಒಂದು ದಿನ ಒಬ್ಬ ಜಂಗಮನ ವೇಷದಲ್ಲಿ ಶಿವ ಇವರ ಮನೆಗೆ ಬಂದ.
ಬಂದ ಜಂಗಮನನ್ನು ಪತಿ - ಪತ್ನಿಯರು ಬಹಳ ಸಂಭ್ರಮದಿಂದ ಸ್ವಾಗತಿಸಿದರು.
ಉಣಲಿಕ್ಕೆ ಎಬ್ಬಿಸಿದರು. ಆದರೆ ಕಪಟ ಜಂಗಮ ಉಣಲಿಕ್ಕೆ ಏಳಲಿಲ್ಲ. ತಾನು
ಬಹು ಮುಖ್ಯವಾದ ಸಹಾಯವೊಂದನ್ನು ಬಯಸಿ ಬಂದಿರುವುದಾಗಿ ಹೇಳಿದ. ಜಂಗಮ
ಕಾರ್ಯವೆ ಶಿವಕಾರ್ಯ. ಏನು ಬೇಕಾದರೂ ಮಾಡುವುದಾಗಿ ಹೇಳಿದರು ದಂಪತಿ
ಗಳು.

ತನ್ನ ಬಳಿ ಇದ್ದ ಪಾತ್ರೆಯೊಂದನ್ನು ನೀಡಿ, "ಇದು ಬಹಳ ಅಮೂಲ್ಯ ಪಾತ್ರೆ.
ಬೇಡಿದ್ದನ್ನು ಈವ ಅಕ್ಷಯಪಾತ್ರೆ, ಮರುದಿನ ಕಾರ್ಯಾರ್ಥವಾಗಿ ನಾನು ಅರಣ್ಯ

ಬಳಸಿ ಹೋಗುತ್ತಿದ್ದೇನೆ, ಆದ್ದರಿಂದ ನೀವು ಪಾತ್ರೆಯನ್ನು ರಕ್ಷಿಸಿಕೊಂಡಿರತಕ್ಕದ್ದು. ನಾನು ಪುನಃ ಬಂದಾಗ ಕೊಡಬೇಕು" ಎಂದ.

ದಂಪತಿಗಳು ಒಪ್ಪಿ ಪಾತ್ರೆಯನ್ನು ಪಡೆದು ಸುರಕ್ಷಿತವಾಗಿ ಪಟ್ಟಿಗೆಯಲ್ಲಿಟ್ಟು ಬೀಗ ಹಾಕಿದರು. ಜಂಗಮ ಕೊಂಚ ಹೊತ್ತು ಬಿಟ್ಟು ಬಂದು ಪುನಃ ತನ್ನ ಪಾತ್ರೆಯ ಮಹತ್ವವನ್ನು ವರ್ಣಿಸಿದ್ದು ವರ್ಣಿಸಿದ್ದೆ. ದಂಪತಿಗಳು ಅವನಿಗೆ ಸಮಾಧಾನ ಹೇಳಿ ಕಳುಹಿಸಿದರು.

ಕುತೂಹಲಕ್ಕೆ ಸಹ ಒಮ್ಮೆ ಆ ಪಾತ್ರೆಯನ್ನು ತೆಗೆದು ಅದರ ಮಹತ್ವವನ್ನು ಪರೀಕ್ಷಿಸುವ ಮನಸ್ಸು ಅವರಿಗಾಗಲಿಲ್ಲ. ಅದನ್ನು ಸುರಕ್ಷಿತವಾಗಿ ಜಂಗಮನಿಗೆ ಅರ್ಪಿಸ ಬೇಕು. ಇಷ್ಟೇ ಅವರ ಅಭಿಲಾಷೆ.

ಮೂರು ದಿನದ ನಂತರ ಜಂಗಮ ಆತುರದಿಂದ ಬಂದು "ನನ್ನ ಪಾತ್ರೆ ಕೊಡಿ-- ನನ್ನ ಪಾತ್ರೆ-- ನನ್ನ ಪಾತ್ರೆ-- " ಎಂದು ಹಂಬಲಿಸಿದ. ದಂಪತಿಗಳು ಸಮಾಧಾನ ಹೇಳಿ – ಜಂಗಮರೇ ಕೂಡಿ- ಭೋಜನ ಮಾಡಿ. ಪಾತ್ರೆ ಸುರಕ್ಷಿತವಾಗಿದೆ. ಉಂಡು ವಿಶ್ರಾಂತಿ ಪಡೆದು ಪಾತ್ರೆ ತೆಗೆದುಕೊಂಡು ಹೋಗಿ" ಎಂದು ಉಪಚರಿಸಿದರು.

ಆದರೆ ಕಪಟ ಜಂಗಮ ಕೇಳುವನೇ –? ಮೊದಲು ನನ್ನ ಪಾತ್ರೆ ಕೊಡಿ-ನಿಮ್ಮ ಉಪಚಾರ ನಾನೊಲ್ಲೆ" ಎಂದು ಕುಣಿದಾಡಿದ. "ಹೆದರಬೇಡಿ ಕೊಡುವೆ" ಎನ್ನುತ್ತಾ ತಿರುನೀಲಕಂಠ ಒಳಗೆ ಬಂದು ಪೆಟ್ಟಿಗೆ ತೆಗೆದು ನೋಡಿದ. ಅಲ್ಲೇನಿದೆ, ಪಾತ್ರೆ ಮಂಗ ಮಾಯವಾಗಿದೆ. ತಿರುನೀಲಕಂಠ ಮುತ್ತೈದೆಯರು ಬೆದರಿ ಬೆಂಡಾದರು. ಇತ್ತ ಜಂಗಮ ಕೂಗಾಡುತ್ತಿದ್ದಾನೆ.

ತಮ್ಮ ಮನೆ ಮಠ ಆಸ್ತಿಯೆಲ್ಲಾ ಅವನಿಗೆ ಸಮರ್ಪಿಸುವುದಾಗಿ ಬೇಡಿ ಕಾಲಿಗೆ ಬಿದ್ದರು. ಆದರೆ ಜಂಗಮ ಕೇಳುವನೇ? ತನ್ನ ಪಾತ್ರೆಯೇ ತನ್ನ ಸರ್ವಸ್ವ ಎಂದು ಕೂಗಿ ಬೀಳುವನು, ಹೊರಳುವನು, ಅಳುವನು. "ಶಿವಭಕ್ತ ಎಂದು ನಿನ್ನನ್ನು ನಂಬಿ ಬಂದೆ, ನೀನಿಂಥಾ ಮೋಸಗಾರ ಎಂದು ಗೊತ್ತಿರಲಿಲ್ಲ" ಎಂದು ಬಾಯಿಗೆ ಬಂದಂತೆ ತಿರುನೀಲಕಂಠನನ್ನು ಬೈದ.

ಕಡೆಗೆ ವಿಷಯ ನ್ಯಾಯಾಲಯಕ್ಕೆ ಹೋಯಿತು. ಯಾವ ಪರಿಹಾರಕ್ಕೂ ಜಂಗಮ ಒಪ್ಪಲಿಲ್ಲ. ಪಾತ್ರೆ ಕಳೆದಿಲ್ಲ. ದಂಪತಿಗಳು ಅದನ್ನು ಎಲ್ಲೋ ಮರೆಮಾಚಿ ನಾಟಕವಾಡುತ್ತಿದ್ದಾರೆ. ತನಗೆ ಅದನ್ನೇ ಕೊಡಿಸಬೇಕು ಎಂದು ನ್ಯಾಯಾಧೀಶರನ್ನು ಕಾಡಿಸಿದ.

"ಅವರು ನಿರಪರಾಧಿಗಳಾದರೆ ಇಬ್ಬರೂ ಕೈಕೈ ಹಿಡಿದುಕೊಂಡು ಪಾತ್ರೆ ಕಂಡಿಲ್ಲ. ಪೆಟ್ಟಿಗೆಯಲ್ಲಿಟ್ಟಿದ್ದು ತಾನೆ ಮಾಯವಾಗಿದೆ" ಎಂದು ಮೂರು ಭಾರಿ ಹೇಳಲಿ ನಂಬುವೆ ಎಂದ. ಇಷ್ಟು ಸುಲಭ ಪರಿಹಾರಕ್ಕೆ ಈ ತಲೆನೋವಿನ ಜಂಗಮನ ಕಾಟ ತಪ್ಪುವುದೆಂದು ನ್ಯಾಯಾಧೀಶ ಹರ್ಷಿಸಿ ಹಾಗೆ ಮಾಡಲು ಹೇಳಿದ.

"ಆದರೆ, ಮರಣದಂಡನೆ ವಿಧಿಸಿದರೂ ಅನುಭವಿಸುತ್ತೇವೆ. ಆದರೆ ಇದೊಂದು ಮಾಡಲಾರೆವು" ಎಂದರು ದಂಪತಿಗಳು. ಕಡೆಗೆ ಜನರೆದುರು ಅವರ ವ್ರತ ಬಯಲಾಯಿತು. ಕಪಟ ಜಂಗಮ ಅಚ್ಚರಿ ಸೂಸಿ - "ನಿಮ್ಮ ವ್ರತ ಹೀಗೆಂದು ಗೊತ್ತಿಲ್ಲ. ಹಾಗಾದರೆ ಒಂದು ಕೋಲಿನ ಆ ತುದಿ ಈ ತುದಿ ಹಿಡಿದು ಮೂರುಬಾರಿ ನೀರಿನಲ್ಲಿ ಮುಳುಗಿ ಏಳಿರಿ--ನಂಬುವೆ" ಎಂದ. ನ್ಯಾಯಾಧೀಶರು, ಜನಗಳು ಎಲ್ಲರೂ ಒತ್ತಾಯಿಸಿದರು. "ಪರಮ ಶಿವಭಕ್ತ ನೀನು. ಜೊತೆಗೆ ನಿರಪರಾಧಿ. ಒಬ್ಬ ಬೇರೆ ಊರಿನ ಜಂಗಮನ ಎದುರಿಗೆ ಏಕೆ ಸಣ್ಣವನಾಗುವೆ?" ಎಂದು ಒತ್ತಾಯಿಸಿದರು. ಸರಿ ದಂಪತಿಗಳು ಕೋಲಿನ ತುದಿ ಹಿಡಿದು ಮೂರು ಭಾರಿ ಮುಳುಗಿ ಎದ್ದರು. ಏನಾಶ್ಚರ್ಯ.....! ಹದಿನಾರರ ಹರೆಯದವರಾಗಿದ್ದರು.

# ಶರಣರು ಮೆಟ್ಟಿದ ಧರೆ—೨

## ಬಸವ ಕಲ್ಯಾಣ (ಭಾಗ—೧)

—ಪ್ರೊ. ಕೆ. ಪಿ. ಶಿವಲಿಂಗಯ್ಯ, ಪ್ರಿನ್ಸಿಪಾಲ್,
ಜೂನಿಯರ್ ಕಾಲೇಜು, ಮಲ್ಲೇಶ್ವರಂ, ಬೆಂಗಳೂರು.

ಪೀಠಿಕೆ:-

ವಿಜಯನಗರ ಸಾಮ್ರಾಜ್ಯವು ವೈಭವದಿಂದ ಮೆರೆದ ಸಂಕೇತವಾಗಿ 'ಹಾಳು ಹಂಪೆ' ಹೇಗೆ ಉಳಿದಿದೆಯೋ, ಹಾಗೆ ಎಂಟನೂರು ವರ್ಷಗಳ ಹಿಂದೆ ಆಧ್ಯಾತ್ಮ (ಅನುಭಾವ)ದ ತುತ್ತತುದಿಗೇರಿದ್ದ ಕಲ್ಯಾಣ ಪಟ್ಟಣವು ಇಂದು ಸಾಮಾನ್ಯ ತಾಲ್ಲೂಕು ಕೇಂದ್ರವಾಗಿ ಕಾಣಿಸುತ್ತಿದೆ. ಕೆಲವರ ವಿದ್ವನ್ಮಿತ್ರರಂತೂ ಈ ಊರಿನಲ್ಲಿ ಅಂತಹ ಅಘಟಿತ ಘಟನೆಗಳು ನಡೆದಿರಲಿಕ್ಕೆ ಸಾಧ್ಯವೇ? ಎಂದೂ ಪ್ರಶ್ನಿಸಿದ್ದುಂಟು. ಆದರೆ ಇಂದಿಗೂ ಸ್ಮಾರಕಗಳಾಗಿ ಉಳಿದಿರುವ ಅನೇಕ ಸ್ಥಳಗಳು ಆ ಶರಣ ವೈಭವದ ಕುರುಹುಗಳಾಗಿ ಕಂಗೊಳಿಸುತ್ತಿದ್ದು, ಅವುಗಳನ್ನು ನೋಡಿದೊಡನೆಯೇ ಹಿಂದಿನ ಚಿತ್ರಣ ಕಣ್ಮುಂದೆ ಬಂದು ನಿಂತಂತೆ ಭಾಸವಾಗುತ್ತದೆ. ಇದನ್ನು ಕೇವಲ ಭಾವುಕನಾಗಿ ನಾನು ಹೇಳುತ್ತಿಲ್ಲ, ಒಂದಲ್ಲ ಎರಡು ಬಾರಿ– ಆ ಕ್ಷೇತ್ರ ನನ್ನನ್ನು ಆಕರ್ಷಿಸಿತೋ ಎಂಬಂತೆ– ಆ ಪವಿತ್ರ ಭೂಮಿಗೆ ಹೋಗಿ ಮೂರು ಭಾಷಣಗಳನ್ನು ಮಾಡಿ ನನ್ನ ಪಾಲಿನ ಅಲ್ಪ ಋಣವನ್ನು ಸಂದಾಯ ಮಾಡಿ ಬಂದಿರುತ್ತೇನೆ.

ಬಸವಣ್ಣನವರು ಎಂದೊಡನೆ ಸ್ಮೃತಿಪಟಲದ ಮೇಲೆ ಸರ್ರನೆ ಮೂಡಿ ಬರುವುದು 'ಕಲ್ಯಾಣ' ದ ಹೆಸರು; ಎಂತಲೇ ಅದಕ್ಕೆ 'ಬಸವ ಕಲ್ಯಾಣ' ಎನ್ನುವ ಹೆಸರು ನೂರಕ್ಕೆ ನೂರರಷ್ಟು ಒಪ್ಪುತ್ತದೆ.

**ಸನ್ನಿವೇಶ ಹಾಗೂ ಪೂರ್ವೇತಿಹಾಸ:** ಜಿಲ್ಲಾ ಕೇಂದ್ರವಾದ 'ಬೀದರ್' ಪಟ್ಟಣಕ್ಕೆ ದಕ್ಷಿಣದಲ್ಲಿ ೪೦ ಮೈಲಿಗಳ ದೂರ, ಹುಮನಾಬಾದಿಗೆ ಆಗ್ನೇಯ ದಿಕ್ಕಿನಲ್ಲಿ ೧೫ ಮೈಲಿಗಳ ದೂರ ಇದೆ ಬಸವಕಲ್ಯಾಣ. ಹಿಂದೆ ಇದು ಪೂರ್ವ ಚಾಲುಕ್ಯರ ರಾಜಧಾನಿಯಾಗಿದ್ದಿತು. ಆರನೆಯ ವಿಕ್ರಮಾದಿತ್ಯನ ಆಸ್ಥಾನ ಕವಿಗಳೂ ಯಾಜ್ಞ-ವಲ್ಕ್ಯ ಸ್ಮೃತಿಗೆ ಟೀಕೆಯನ್ನು ಬರೆದಿರುವವರೂ ಆದ ವಿಜ್ಞಾನೇಶ್ವರರು ಈ ಪಟ್ಟಣದಂತಹ ಮತ್ತೊಂದು ಪಟ್ಟಣವಿಲ್ಲವೆಂದು ಹೊಗಳಿದ್ದಾರೆ. (ನಾಸೀದಸ್ತಿ ಕ್ಷಿತಿತಲೇ ಕಲ್ಯಾಣಪುರ ———) ಮತ್ತೊಬ್ಬ ಆಸ್ಥಾನ ಕವಿಗಳಾಗಿದ್ದ ಬಿಲ್ಹಣರು ತಮ್ಮ

'ವಿಕ್ರಮಾಂಕ ಚರಿತ್ರೆ' ಯಲ್ಲಿ ಈ ಪಟ್ಟಣವನ್ನು ಕುರಿತ ವಿವಿಧ ವರ್ಣನೆಯಿದೆ. ಬಸವಾದಿ ಪ್ರಮಥರು ತಂತಮ್ಮ ಅನೇಕ ವಚನಗಳಲ್ಲಿ ಈ ಪಟ್ಟಣವನ್ನು ಪ್ರಸ್ತಾಪಿಸಿರುತ್ತಾರೆ. ಪೂರ್ವ ಚಾಲುಕ್ಯ ರಾಜರುಗಳಾದ ಒಂದನೆಯ ಸೋಮೇಶ್ವರ, ಎರಡನೆಯ ಸೋಮೇಶ್ವರ, ಆರನೆಯ ವಿಕ್ರಮಾದಿತ್ಯ, ಮೂರನೆಯ ಸೋಮೇಶ್ವರ, ಜಗದೇಕಮಲ್ಲ, ಮೂರನೆಯ ತೈಲಪ ಮೊದಲಾದವರು ಈ ಪಟ್ಟಣವನ್ನು 'ರಾಜಧಾನಿಯಾಗಿ ಮಾಡಿಕೊಂಡು ಆಡಳಿತ ನಡೆಸಿದರು. ಮುಂದೆ ಚಾಲುಕ್ಯರ ಸಾಮಂತನೂ, ವಿಕ್ರಮಾದಿತ್ಯನ ಮಗಳ ಮಗನೂ ಆದ ಕಲಚುರ್ಯ ಬಿಜ್ಜಳನು ಮಂಗಳವಾಡದಿಂದ ಕಲ್ಯಾಣಕ್ಕೆ ಬಂದು ಸಿಂಹಾಸನವನ್ನೇರಿದನು. (ಕ್ರಿ.ಶ.ಸು. ೧೧೫೬) ಇವನ ಕಾಲದಲ್ಲಿಯೇ ಬಸವಣ್ಣನವರು ಲೆಕ್ಕಪರಿಶೋಧಕರಾಗಿ ಕೆಲಸಕ್ಕೆ ಸೇರಿದರು; ತಮ್ಮ ಪ್ರಾಮಾಣಿಕತೆಯಿಂದಲೂ, ದಕ್ಷತೆಯಿಂದಲೂ ಮಹಾಮಂತ್ರಿಗಳಾದರು.

ಬಸವಣ್ಣನವರು ಹೊಲೆಯಮಾದಿಗರೆಂಬ ಜಾತಿಯ ಬಲೆಯನ್ನೇ ಕಿತ್ತೊಗೆದು 'ವಿಪ್ರ ಮೊದಲು ಅಂತ್ಯಜ ಕಡೆಯಾಗಿ ಶಿವಭಕ್ತರನ್ನೆಲ್ಲ ಒಂದೆ ಎಂಬೆ___' ಎಂದು ಸಾರಿ ಹೇಳಿದ್ದಲ್ಲದೆ, ಅದನ್ನು ಕಾರ್ಯತಃ ಆಚರಿಸಿ ತೋರಿಸಿದರು. ಇದರಿಂದ 'ಧಾರ್ಮಿಕ ಕ್ರಾಂತಿ'ಯೇ ಆಯಿತೆಂಬುದನ್ನು ಇತಿಹಾಸ ಬಲ್ಲವರೆಲ್ಲ ಅರಿತಿದ್ದಾರೆ.

ಕಲಚುರ್ಯರ ಅನಂತರ ಕ್ರಿ.ಶ. 1200ರ ಸುಮಾರಿಗೆ ಈ ಪಟ್ಟಣವು ದೇವಗಿರಿ ಯಾದವರ ಅಳ್ವಿಕೆಗೂ, ಆಮೇಲೆ ಮಹಮದ್ ಬಿನ್ ತೊಗಲಖನ ಆಡಳಿತಕ್ಕೂ ಒಳಪಟ್ಟಿತು ಮಹಮದ್ ಬಿನ್ ತೊಗಲಖನ ಎರಡು ಶಾಸನಗಳು ಈ ಪಟ್ಟಣದಲ್ಲಿ ಇವೆ ಅಲ್ಲಿಂದ ಮುಂದೆ ಈ ಪಟ್ಟಣವು ಬೀದರ್‌ನ ಬರೀದ ಶಾಹಿ ಸುಲ್ತಾನರಿಗೂ, ಬಿಜಾಪುರದ ಆದಿಲ್ ಶಾಹಿ ಸುಲ್ತಾನರಿಗೂ ಸೇರಿತು. ಆಮೇಲೆ ಹೈದರಾಬಾದಿನ ನಿಜಾಮರಿಗೆ ಸೇರಿದಾಗ, ಅವರು ಇದನ್ನು ಒಬ್ಬ ನವಾಬನಿಗೆ ಜಹಗೀರಿಯಾಗಿ ಕೊಟ್ಟರು. ಭಾಷಾವಾರು ಪ್ರಾಂತ್ಯ ರಚನೆಯಾದ ಮೇಲೆ 'ಕಲ್ಯಾಣ'ವು 'ಬಸವಕಲ್ಯಾಣ' ವೆಂಬ ನಾಮಕರಣ ಹೊಂದಿ ಕರ್ನಾಟಕ ರಾಜ್ಯದಲ್ಲಿ ಸೇರ್ಪಡೆಯಾಗಿರುತ್ತದೆ.

ಕಲ್ಯಾಣ ಪಟ್ಟಣದ ಕೋಟೆ — ಕರಿಯ ಕಲ್ಲಿನಲ್ಲಿ ಕಟ್ಟಿರುವ ಭದ್ರವಾದ ಕೋಟೆಯಿದು. ಮೊದಲಾಗಿ ಕಲ್ಯಾಣದ ಚಾಲುಕ್ಯರ ಕಾಲದಲ್ಲಿ ಕಟ್ಟಲಾದ ಇದು ಕಾಲಕಾಲಕ್ಕೆ ಹಂತಹಂತವಾಗಿ ಮುಂದುವರಿದ ಕಟ್ಟಡವಾಗಿ ಕಂಡುಬರುತ್ತದೆ. ಈ ಕೋಟೆಯ ಒಳಗಡೆ ಪುರಾತನ ದ್ವಾರಗಳೂ, ತೋಪುಗಳೂ. ತೋಪಿನ ಗುಂಡಿಗಳೂ ಇವೆ. ಈ ಕೋಟೆಯ ಮೇಲೆ ಇಟ್ಟಿರುವ 'ನಾಗರಾಜೀ' ಎಂಬ ತೋಪು ೯೨ ಅಡಿ ಉದ್ದವಾಗಿರುತ್ತದೆ. ಇಲ್ಲಿನ ರಾಜಮಹಲಿನಲ್ಲಿ ಕಲ್ಯಾಣಿ ಚಾಲುಕ್ಯರ ಭದ್ರವಾದ ಆದರೆ ಯಾವ ಮೂರ್ತಿಯೂ ಇಲ್ಲದ ಗುಡಿಯೊಂದಿದೆ ಇದರ ಜಾಕಟ್ಟಿನ ಮೇಲೆ

ಗಣಪತಿಯಿದೆ. ಹಿಂದೆ ಇದು ಲಕ್ಷ್ಮೀ (ನಾರಾಯಣ) ದೇವಸ್ಥಾನವಾಗಿದ್ದಿತೆಂದು ಇಲ್ಲಿನವರು ಹೇಳುತ್ತಾರೆ. ಈ ಕೋಟೆಯಲ್ಲಿ 'ಚರಕವೋಟ' ಎಂಬ ರಾಟೆ ಇದೆ. ಇದಕ್ಕೆ ಹೋರಿಗಳನ್ನೂ ಕೋಣಗಳನ್ನೂ ಹೂಡಿ ಬಾವಿಯಿಂದ ನೀರನ್ನು ಎತ್ತಿ ಕೋಟೆಯ ಪ್ರದೇಶಗಳಿಗೆಲ್ಲ ಒದಗಿಸುತ್ತಿದ್ದರಂತೆ ಮಹಮದ್ ಪೈಗಂಬರರ ಮೊಮ್ಮಗ ಹುಸೇನರ ಹೆಸರಿನಲ್ಲಿರುವ ಇಲ್ಲಿನ ಒಂದು ಕಟ್ಟಡದ ಮಧ್ಯದಲ್ಲಿ ಕುಳಿತು ನವಾಬರು ನ್ಯಾಯ ತೀರ್ಮಾನ ಮಾಡುತ್ತಿದ್ದರೆಂದು ಇಲ್ಲಿನ ಸ್ಥಳ ಪುರಾಣದಿಂದ ತಿಳಿದು ಬರುತ್ತದೆ.

ಬಿಜ್ಜಳರಾಜ, ಮಹಾಮಂತ್ರಿ ಬಲದೇವರು, ಅವರ ಅನಂತರ ಮಹಾಮಂತ್ರಿ ಸ್ಥಾನಕ್ಕೆ ಆಯ್ಕೆಯಾದ ಬಸವರಾಜ ದೇವರು ಇಲ್ಲಿ ಕುಳಿತು ಆಡಳಿತ ನಡೆಸುತ್ತಿದ್ದರೆಂದು ನಾವು ವೀಕ್ಷಿಸಲು ಹೋದಾಗ ಮಾರ್ಗದರ್ಶಕರೊಬ್ಬರು (ಗೈಡ್) ಹೇಳಿದರು.

ಮೋತಿಮಹಲ್ ಎಂಬುದು ಕೋಟೆಯಲ್ಲಿ ಅತ್ಯಂತ ಎತ್ತರವಾದ ಸ್ಥಳದಲ್ಲಿದೆ. ಹೈದರಿಮಹಲ್ ಎನ್ನುವುದು ಹಿಂದೆ ವಸ್ತು ಸಂಗ್ರಹಾಲಯವಾಗಿದ್ದಿತೆಂದೂ, ಇಲ್ಲಿನ ಹಲವಾರು ಸುಂದರ ವರ್ಣ ಚಿತ್ರಗಳು ಹೈದರಾಬಾದಿಗೆ ಸಾಗಿಸಲ್ಪಟ್ಟುವೆಂದೂ ತಿಳಿದು ಬರುತ್ತದೆ. ಈ ಕೋಟೆಯ ಗೋಡೆಗಳ ಮೇಲೆ ಹಿಂದು ಮತ್ತು ಜೈನ ಮೂರ್ತಿಗಳಿವೆ.

(ಕಲ್ಯಾಣದ ಇತರ ಮುಖ್ಯ(ಸ್ಥಳ)—ಭಾಗಗಳಿಗೆ ಮುಂದಿನ ಸಂಚಿಕೆಯನ್ನು ನೋಡಿರಿ.)

# ಅಕ್ಕ ತುಳಿದ ಹಾದಿ:—

ಉಮಾದೇವಿ
ಅಧ್ಯಕ್ಷಿಣಿ ಜಗನ್ಮಾತೆ ಶ್ರೀ ಅಕ್ಕಮಹಾದೇವಿ ಮಹಿಳಾ ಆಶ್ರಮ, ಕುವೆಂಪು ರಸ್ತೆ, ಶಿವಮೊಗ್ಗ.

ಮಾತೃದೇವೋಭವ" ನುಡಿಯೊಂದು ನಲಿದಿತ್ತು ನಾಲಿಗೆಯಲಿ
ಕರ್ತನ ನಿಲುವಿಗೆ ಮಾತೆಯರನೇರಿಸಿತ್ತು
ಅರ್ತಿಯಿಂದಲಿ ನುಡಿ ನಡೆಯೊಳಗೆ ತೊಳಗಿ ಬೆಳಗಿತ್ತು.

ವೇದಕಾಲದೊಳಗೆ ಉಸಿರಾಡಲು ತುಸು ಬಿಡುವಿತ್ತು
ವಿದ್ಯೆಯ ತುಂಬಿಕೊಳಲು ಸ್ತ್ರೀಯರು ಅಡಿ ಇಟ್ಟಿದ್ದರು
ಬೋಧಿಸಲು ಮುಂದಾಗಿದ್ದರು ಕೆಲವರು.

ಏನಾದರೇನಂತೆ ಸಾರ್ವತ್ರಿಕ ಸ್ವಾತಂತ್ರ್ಯವು ಕನ್ನಡಿಯ ಗಂಟಾಗಿತ್ತು
ತನ್ನೊಳಗಡಗಿದ ಸುಪ್ತ ಶಕ್ತಿ ಕುದಿ ಕುದಿದು ಕಾದಿತ್ತು
ಸಣ್ಣ ರಂಧ್ರ ನೆಪವಾಗಿ ಎಂದು ಉಕ್ಕಿ ಹೊರಬೀಳ್ವೆನೊ ಎಂದು

ದುಡಿವ ಕೈಗಳು ಮೇಲಾಗಲು, ಅಹಂ ನೆತ್ತಿಗೇರಲು
ಹಡೆದವಳ ಕಡೆಗಣಿಸಿ. ಕೆಡವಿತ್ತು ತನ್ನಡಿಗೆ, ಮೆಲೇಳಲು
ಬಿಡದೆ ತುಳಿದಿತ್ತು ಸ್ತ್ರೀಯ, ಒಣಪೌರುಷದಲಿ ಪುರುಷಕುಲ

ಶಕ್ತಿಯ ತತ್ವವು ವ್ಯಕ್ತಿಯ ಕ್ರೌರ್ಯಕೆ ತಲೆವಾಗಿ
ನಿತ್ಯವು ಹರಿಸಿತ್ತು ಸೋಲಿನ ಸಲಿಲಧಾರೆಯ
ಮುಕ್ತಿದಾತನೆ ಎಂದಿಗೊ ಬಿಡುಗಡೆ ಎಂದು ಸುಯ್ದಿತ್ತು.

ಭೋಗದ ಬೊಂಬೆ ನೀನು, ಸಿಂಗಾರದ ಸಿಂಬೆ ನೀನು
ನಗಗಳ ಮರೆಯುಲಡಗಿಹ ಜೀವಂತ ಬೊಂಬೆ ನೀನು
ನಿಂಗೇಕೆ ಎಲೆ ಹೆಣ್ಣೆ ಸ್ವಾತಂತ್ರ್ಯವೆಂಬ ಕರವಾಲ ತಿವಿದಿತ್ತು.

ದೇವನಿತ್ತ ಸ್ವಚ್ಛಗಾಳಿ, ನಿಚ್ಚಳ ಬೆಳಕೂ ದೂರಾಯ್ತು, ಚಿಂತೆಯ
ಕಾವಿನ ಹಂಜರದಲಿ ವೈಮನ ಬೆಂದೋಯ್ತು
ಸಾವೊಂದೇ ಕಡೆಗೆ ಹಕ್ಕಿಯ ಬಿಡುಗಡೆ ನೆಪವಾಯ್ತು

# ತುಮಕೂರು ವೀರಶೈವ ಸಹಕಾರ ಬ್ಯಾಂಕ್ ನಿಯಮಿತ.,

ಶ್ರೀ ಜಯಚಾಮರಾಜೇಂದ್ರ ರಸ್ತೆ, ತುಮಕೂರು-೧

## ಠೇವಣಾತಿ ಯೋಜನೆಗಳು ಮತ್ತು ಬಡ್ಡಿ ದರಗಳು:

**ಉಳಿತಾಯ ಖಾತೆ:**

### ಉಳಿತಾಯವೇ ಆಪದ್ಧನ

ಈ ಖಾತೆಯನ್ನು ರೂ. 5-00 ಗಳಿಂದ ಆರಂಭಿಸಬಹುದು. ನಿಮ್ಮ ಹೆಸರಿಗೆ ಬಂದ ಚೆಕ್ಕುಗಳನ್ನು ನಾವು ಪಡೆದು ವಸೂಲಿಗೆ ಕಳುಹಿಸಿಕೊಡುವೆವು. ನೀವು ಖಾತೆಯಲ್ಲಿಡುವ ಮೊಬಲಗಿಗೆ ಆ ತಿಂಗಳ ಕನಿಷ್ಠ ಶಿಲ್ಕಿನ ಮೇಲೆ ಬಡ್ಡಿಯನ್ನು ಕೊಡಲಾಗುವುದು. ಅವಶ್ಯಕತೆ ಬಂದಾಗ ಹಣವನ್ನು ಪಡೆಯಬಹುದು. ನಿಮ್ಮ ಖಾತೆಯಲ್ಲಿ ಕನಿಷ್ಠ ಶಿಲ್ಕು ರೂ. 100-00 ಇದ್ದರೆ ನಿಮಗೊಂದು ಚೆಕ್ ಪುಸ್ತಕ ಉಪಯೋಗಿಸಲು ಅವಕಾಶವಿದೆ.

ಶೇಕಡ 6 ರಂತೆ ಬಡ್ಡಿಯನ್ನು ನೀವಿಟ್ಟ ಕನಿಷ್ಠ ಶಿಲ್ಕು ತಿಂಗಳು ಮೊಬಲಗಿನ ಮೇಲೆ ಕೊಡುತ್ತೇವೆ.

**ಚಾಲ್ತಿ ಖಾತೆ:**

ಈ ಖಾತೆಯನ್ನು ರೂ. 100-00 ಗಳ ಮೇಲ್ಪಟ್ಟು ಆರಂಭಿಸಬಹುದು. ಶೇಕಡ ½ ರಂತೆ ಬಡ್ಡಿಯನ್ನು ಕನಿಷ್ಠ ತಿಂಗಳ ಶಿಲ್ಕು ಮೇಲೆ ಕೊಡಲಾಗುವುದು.

### ಮಾಯಿದೆ ಠೇವಣಾತಿಗಳು

ಠೇವಣಾತಿಗಳ ಮೇಲಿನ ಬಡ್ಡಿ ದರಗಳು

| | | | |
|---|---|---|---|
| 15 ದಿವಸದಿಂದ | 45 ದಿವಸಗಳವರೆಗೆ | ಶೇ. | 4 |
| 46 ದಿವಸದಿಂದ | 90 ದಿವಸಗಳವರೆಗೆ | ಶೇ. | 5 |
| 91 ದಿವಸದಿಂದ | 6 ತಿಂಗಳ ಒಳಗೆ | ಶೇ. | 6 |
| 6 ತಿಂಗಳಿಂದ | 9 ತಿಂಗಳ ಒಳಗೆ | ಶೇ. | 7 |
| 9 ತಿಂಗಳಿಂದ | 1 ವರ್ಷದ ಒಳಗೆ | ಶೇ. | 8 |
| 1 ವರ್ಷದಿಂದ | 2 ವರ್ಷಗಳು | ಶೇ. | 9 |
| 2 ವರ್ಷ ಮೇಲ್ಪಟ್ಟು | 3 ವರ್ಷಗಳ ಒಳಗೆ | ಶೇ. | 10 |
| 3 ವರ್ಷ ಮೇಲ್ಪಟ್ಟು | 5 ವರ್ಷಗಳ ಒಳಗೆ | ಶೇ. | 11 |
| 5 ವರ್ಷ ಮೇಲ್ಪಟ್ಟು | .... .... .... | ಶೇ. | 12 |

ತಾಳಲಾರೆ ಓ ದೇವನೇ, ಬಾಳಲಾರೆ ನರಸತ್ತ ಬಾಳ
ಇಳೆಗೇಕೆ ತಂದಿಳುಹಿದೆಯಯ್ಯಾ ? ಎನ್ನನೀ ದಾಸ್ಯ
ಬಾಳ್ವಿಯ ಶೃಂಖಲೆಯ ಬೆಂಕಿಯುಲೇಕೆ ಒಗೆದೆಯಯ್ಯಾ ?

ಆವ ಜನ್ಮದ ಶಾಪದ ಬಳುವಳಿಯೊ
ಬೇವಿನ ಹಸಾದ ಬಾಳತಾಟಿಗೆ ದೊರಕಿರಲು, ಅಬಲೆಯರ
ಕಾವ ದೇವ ಬೇಗನೆ ಕಣ್ತೆರೆಯಯ್ಯಾ ಎಂದು ಕೊರಗಿತ್ತು

ಶಾಸನವೊಂದ ಹೇರಿದ ಮನು ಸ್ತ್ರೀಕುಲದ ಬೆನ್ನಿಗೆ
ಸಾಸಿರ ವರುಷ ಕೈದಿಯಾದಳು ಕುಲ ನಾರಿ
ಉಸಿರ ನುಂಗಿ ಬಾಳಿದಳು ತಾಳ್ಮೆ-ತ್ಯಾಗಗಳ **ಸುವಿಚಾರಿ**

ಶತ ಶತಮಾನಗಳ ಕಾರಿರುಳಲಿ ಕಳೆದಳು
ಮತ್ತೆರಡು ಶತಮಾನಗಳು ಉರುಳಲು
ಮಾತೃಕುಲದ ತಾಳ್ಮೆ ನೆತ್ತಿಗೇರಿತು.

ಅಸಮತೆ ಅನ್ಯಾಯಗಳು ಎಲ್ಲೆ ಮೀರಲು
ಕುಸುಮ ಕೋಮಲೆಯ ಸಹನೆ ಮೇರೆವರಿಯಲು
ದೆಸೆ ದೆಸೆಗೂ ಮೊಳಗಿತು ಕ್ರಾಂತಿ ಕಹಳೆಯ ರವ.

ಮರ್ತ್ಯಲೋಕದಲಿ ಮಾತೆಯರ ಸಂಘಗಳ ಜನನ
ಸತ್ಯ ಸಮಾನತೆಗಾಗಿ ಸಮ್ಮೇಳನಗಳಲಿ ಮಿಲನ
ಗೊತ್ತುವಳಿಗಳು ಉದ್ಧಾರದ ನೆಲೆಯಾಗಿ ಮತಿಯಲಿ ಸ್ಮರಣ

ಕ್ರಾಂತಿಯ ಕಿಡಿಯಾಗಿ ಬಂದಳು ಶಾಂತಿಯ ನಿಧಿ; ಪುರುಷರ
ಭ್ರಾಂತಿಯನಳಿಸಿದ ವೀರ ವೈರಾಗ್ಯ ನಿಧಿ, ತಪೋನಿಧಿ
ಸಂತ ಶರಣೆ ಉಡುತಡಿಯ ಶ್ರೀ ಮಹಾದೇವಿಯಕ್ಕ

ಕವಿಕಲ್ಪನೆ ದೂರವಿರಲಿ, ಪೌರಾಣಿಕತೆಯ ಮಾತತ್ತಲಿರಲಿ
ದೇವಕಾರುಣ್ಯವ ಹೊತ್ತು ಭುವಿಗೆ ಬಂದ ದೇವಮಾನವಳೆಂಬ
ಭಾವನೆಗೆ ಮುಸುಕಿದ ಮಿಥ್ಯೆಯ ಜಗವಿಂದೇ ಕಿತ್ತೊಗೆಯಲಿ

ಎಂಭತ್ನಾಲ್ಕು ಲಕ್ಷಯೋನಿಯೊಳಗೆ ಬಾರದ ಭವಂಗಳನುಂಡು
ಹಿಂದಣ ಜನ್ಮಗಳ ಕತ್ತಲೆಯನಳಿದು, ದಿಟದಲೊಂದಾಗಲೆಂದು
ಬಂದೆನೆಂದ ಅಕ್ಕನ ವಚನದ ಮುಂದೆ ಅನ್ಯ ಮಾತುಂಟೆ ?

ಗಂಗಾ

ಶಿವನರಮನೆಯು ಸೃಷ್ಟಿ ಸೌಂದರ್ಯ ದಾಗರವು
ಶಿವಾನುಭವದ ಕಂಪ ಪಸರಿಸಿದ ದಿವ್ಯಸೆಲೆಯು
ಶಿವನವೊಗ್ಗೆ ಕರುನಾಡ ಹೃದಯದೈಸಿರಿಯು

ಶಿವನ ವೊಗ್ಗೆಯ ಸುತೆ, ಉಡುತಡಿಯ ವೈಭವ ಭಾಷೆಗೆ ನಿಲುಕದು
ಶಿವಸತಿಯ ಸ್ವಾಗತಕೆ ಮೈಯೆಲ್ಲ ಕಣ್ಣಾಗಿಕಾಯ್ದ ಭಾವವದು
ಭಾವನೆಗಳ ಭಸ್ಮಗೈದ ಪುರುಷಕುಲದ ಕಣ್ತೆರೆಸಲು ಬಂದಾಳೆಂದೊ ?

# ಬಸವಣ್ಣನವರ ದೃಷ್ಟಿಯಲ್ಲಿ ಮಹಿಳೆ

ಜೆ. ಶಾರದಾ ರಾಜಶೇಖರ್
847, 4ನೇ ಮುಖ್ಯರಸ್ತೆ, ವಿಜಯನಗರ. ಬೆಂಗಳೂರು-10

ಶತ ಶತಮಾನಗಳಿಂದ ಮಹಿಳೆಯರ ಜೀವನವು ಪುರುಷ ನಿರ್ಭರವಾಗಿಯೂ ಪುರುಷ ಸಾಪೇಕ್ಷಿಯಾಗಿಯೂ ಉಳಿದುಬಿಟ್ಟಿತ್ತು. ಆದ್ದರಿಂದ ಮಹಿಳೆಯರ ಬಲಿದಾನಕ್ಕಾಗಲಿ, ಆತ್ಮೋನ್ನತಿಗಾಗಲಿ ಕುಟುಂಬ ಹಾಗೂ ಸಮಾಜದಲ್ಲಿ ಅವರ ಭೂಮಿಕೆಯು ಗೌಣವಾಗಿಯೇ ಉಳಿದುಬಿಟ್ಟಿತ್ತು. ಈಶ್ವರಭಕ್ತಿ ಹಾಗೂ ಆತ್ಮಜ್ಞಾನದಲ್ಲಿ ಮಗ್ನರಾಗಿದ್ದ ಪುರುಷರು ಸ್ತ್ರೀಯರನ್ನು ಮೋಕ್ಷಮಾರ್ಗದಲ್ಲಿಯ ಪ್ರಮುಖ ಆತಂಕವೆಂದೇ ಭಾವಿಸಿದ್ದರು. ಸಭ್ಯ ಪುರುಷರು ಮಹಿಳೆಯರ ಚರ್ಚೆ ಮಾಡುವುದು ವಿಷಯಾಸಕ್ತಿಯ ಲಕ್ಷಣವೆಂದೇ ಭಾವಿಸಿದ್ದರು. ವಿರಕ್ತರು ಅವರ ಮುಖಾವಲೋಕನ ಮಾಡುವುದು ಕೂಡ ನಿಷಿದ್ಧವೆಂದು ಭಾವಿಸಿದ್ದರು. ವಿಲಾಸಿಗಳು ಹಾಗೂ ಕವಿಗಳು ಅವರನ್ನು ವಿಲಾಸ ಹಾಗೂ ಭೋಗದ ವಸ್ತುವೆಂದೇ ತಿಳಿದಿದ್ದರು. ಗೃಹಸ್ಥರು ಹೆಣ್ಣನ್ನು ತಾಯಿ ಮತ್ತು ಮಗಳ ರೂಪದಲ್ಲಿ ಕಂಡು ಅವರನ್ನು ದೇವತೆಯನ್ನಾಗಿ ಭಾವಿಸಿ ಪವಿತ್ರವಾದ ಇಡುಗಂಟುಗಳೆಂದೆ ತಿಳಿದಿದ್ದರು. ಆದರೆ ಇವರಲ್ಲಿ ಯಾರೂ ಹೆಣ್ಣನ್ನು ಸಮಾನಸತ್ವ ಹಾಗೂ ಸಮಾನ ಧರ್ಮಾಧಿಕಾರವುಳ್ಳ ಮಾನವಳೆಂದು ಪರಿಗಣಿಸಿರಲಿಲ್ಲ.

ಆದರೆ ವಚನಕಾರರು ಧರ್ಮ ವಿಷಯದಲ್ಲಿ ಅಂಗಭೇದವನ್ನು ತೆಗೆದುಹಾಕಿ ಸ್ತ್ರೀಯರಿಗೆ ಪುರುಷರಿಗಿದ್ದ ಎಲ್ಲ ಹಕ್ಕುಗಳನ್ನು ಕೊಟ್ಟುಬಿಟ್ಟರು. ಸತಿಪತಿಗಳಿಬ್ಬರೂ ಸರಿಯಾಗಿ ಭಕ್ತಿ ಮಾಡಿದರೆ ಅದು ದೇವರಿಗೆ ಹಿತವೆಂದು ನುಡಿದರು. ಇಲ್ಲದಿದ್ದರೆ ಅಮೃತದೊಳಗೆ ವಿಷ ಕಲಸಿದಂತಾಗುವುದು. ಕಣ್ಣುಗಳು ಎರಡು ಇದ್ದರೂ ದೃಷ್ಟಿ ಒಂದೇ ಇರುವಂತೆ ಪತಿಪತ್ನಿಯರು ಏಕಭಾವರಾಗಿ ಭಜಿಸಿದರೆ ದೇವರಿಗೆ ಯೋಗ್ಯ ರೀತಿಯಿಂದ ಅರ್ಪಿತವಾಗುವುದೆಂದರು. ದೀಕ್ಷೆ, ಪೂಜೆ, ಮುಂತಾದ ಪ್ರತಿಯೊಂದು ವಿಷಯದಲ್ಲಿ ಸ್ತ್ರೀಯರು ಪುರುಷರಷ್ಟೇ ಅರ್ಹರು ಎಂದು ವಚನಕಾರರು ನಿರ್ಣಯಿಸಿ ಅದರಂತೆ ಸ್ತ್ರೀಯರಿಗೆ ಧರ್ಮ ಸಾಮ್ರಾಜ್ಯದಲ್ಲಿ ಪೂರ್ಣ ಸ್ವಾತಂತ್ರ್ಯವನ್ನು ಕೊಟ್ಟರುವರು.

ವಚನಕಾರರಲ್ಲಿ ಅಗ್ರಗಣ್ಯರೆನಿಸಿಕೊಂಡಿರುವ ಬಸವಣ್ಣನವರು ಮಹಿಳೆಯರ ಬಗ್ಗೆ ಯಾವ ದೃಷ್ಟಿಕೋನವಿಟ್ಟುಕೊಂಡಿದ್ದರು ಎಂಬುದು ವಿವೇಚಿಸುವುದೇ ಈ

ಲೇಖನದ ಉದ್ದಿಶ್ಯ —— ನಮ್ಮ ದೇಶದಲ್ಲಿ ಮಹಿಳೆಯರಿಗೆ ಪ್ರಾಚೀನ ಕಾಲದಿಂದಲೂ ಮನ್ನಣೆಏನೋ ಉಂಟು, ಆದರೆ ಅವರಿಗೆ ಧಾರ್ಮಿಕ ಕಾರ್ಯದಲ್ಲಿ ಸರಿಯಾದ ಅ ಕಾರ ಕೊಟ್ಟ ವಿಷಯವು ಯಾವ ಧರ್ಮದ ಇತಿಹಾಸವನ್ನು ವೀಕ್ಷಿಸಿದರೂ ಕಂಡ ಬರುವುದಿಲ್ಲ. ಉಪನಿಷತ್ ಕಾಲದಲ್ಲಿ ಗಾರ್ಗೇಯಿ, ಮೈತ್ರೇಯಿ ಮೊದಲಾ ಋಷಿಪತ್ನಿಯರು ವೇದಾಂತದ ಚರ್ಚೆಗಳಲ್ಲಿ ಭಾಗವಹಿಸುತ್ತಿದ್ದರೆಂಬುದು ಕಂಡ ಬಂದರೂಸಹ ಮುಂದೆ ಕೆಲವು ಕಾಲದಲ್ಲಿ ಕುಂಠಿತವಾಯ್ತೆಂದು ತಿಳಿದು ಬರುತ್ತದೆ

ವೈದಿಕ ಸಮಾಜದಲ್ಲಿ ಸ್ತ್ರೀಗೆ ಉಪನಯನ ಸಂಸ್ಕಾರವೇ ಇಲ್ಲ. ಆದರೆ ವೀ ಶೈವ ಸಮಾಜದಲ್ಲಿ ಪುರುಷರಿಗೆ ಲಿಂಗಧಾರಣ ಸಂಸ್ಕಾರವಾಗುವಂತೆ, ಹೆಣ್ಣಿಗೂ ಶಿ ಧೀಕ್ಷೆಯನ್ನು ಕೊಟ್ಟು ಮಂತ್ರಪಿಂಡವನ್ನಾಗಿ ಮಾಡುವರು.

ಸ್ತ್ರೀ ಪುರುಷರಿಬ್ಬರಿಗೂ ಸಂಸ್ಕಾರವಾಗುವುದರಿಂದ ಪುರುಷರಂತೆ ಸ್ತ್ರೀಯರಿಗೂ ಭೇದಭಾವವಿಲ್ಲದೆ ಅಧಿಕಾರ ಕೊಟ್ಟಂತಾಯಿತು. ಇದು ವೀರಶೈವ ಧರ್ಮದ ಶ್ರೇಷ್ ತ್ವದ ಹೆಗ್ಗುರುತು.

ಸ್ತ್ರೀಯರಿಗೆ ಇದ್ದ ಅಧಿಕಾರವನ್ನು ಬಸವಣ್ಣನವರು ಆಚರಣೆಯಲ್ಲಿ ತಂದು ಜಗತ್ತಿನಲ್ಲಿ ಕೀರ್ತಿಕಾಯರಾದರು. ಯಾವ ತತ್ವಗಳೇ ಇರಲಿ ಶಾಸ್ತ್ರಗಳಲ್ಲಿ ಇದ್ದು ಕೃತಿಯಲ್ಲಿ ಬಾರದೇ ಇದ್ದರೆ ಅವುಗಳ ಉಪಯೋಗವಾದರೂ ಏನು? ಅವುಗಳನ್ನು ಕಾಯಾ, ವಾಚಾ, ಮನಸಾ ಜನಸಾಮಾನ್ಯರಲ್ಲಿ ಯಾರು ಪ್ರಚಾರ ಮಾಡುತ್ತಾ ರೆಯೋ ಅವರೇ ಧರ್ಮವೀರರು.

ಅನುಭವಮಂಟಪವೆಂದರೆ ಒಂದು ಧಾರ್ಮಿಕ ಸಂಸ್ಥೆಯಿತ್ತು ಎನ್ನಬಹುದು. ಶಿವನೇ ಪರಮದೈವತ್ವವೆಂದು ಶರಣರು ತಿಳಿಯುತ್ತಿದ್ದುದರಿಂದ ಆ ಹೆಸರನ್ನು ಕೊಟ್ಟಿರ ಬಹುದು. ಅನುಭವಕ್ಕೆ ಮತ್ತು ಸಾಕ್ಷಾತ್ಕಾರಕ್ಕೆ ಶರಣರು ಎಷ್ಟು ಮಹತ್ವವನ್ನು ಕೊಡುತ್ತಿದ್ದರು ಎಂಬುದು ಈ ಹೆಸರಿನಿಂದ ನಮಗೆ ಅರಿವಾಗುತ್ತದೆ. 'ತನ್ನೊಳಗರಿದ ಅನುಭಾವಿಯಿಂದ ಘನವಿಲ್ಲ' ಎಂದು ಪ್ರತಿಪಾದಿಸುವವರ ಸಭೆಗೆ ಅನುಭವ ಮಂಟಪ ವೆಂಬ ಹೆಸರು ಅನ್ವರ್ಥಕವೇ ಸರಿ. ಬಸವಣ್ಣನವರು ಬಿಜ್ಜಳನ ಆಸ್ಥಾನದಲ್ಲಿ ಮಂತ್ರಿ ಯಾಗಿದ್ದರು. ಅವರು ಅತ್ಯಂತ ಧರ್ಮಿಷ್ಠರೂ ಉತ್ಕಟ ಭಕ್ತರೂ ಸತ್ಯ ಧರ್ಮದ ಪ್ರಸಾರ ಮಾಡಬೇಕೆಂಬ ಉತ್ಸುಕತೆ ಉಳ್ಳವರಾಗಿದ್ದುದರಿಂದ ಅನೇಕ ಶರಣ ಶರಣೆಯ ರಿಗೆ ಅನುಭವ ಮಂಟಪದಲ್ಲಿ ಆಶ್ರಯವನ್ನು ಕೊಟ್ಟರು.

ಅಲ್ಲಮಪ್ರಭುವೇ ಅಧ್ಯಕ್ಷರಾಗಿದ್ದ ಅನುಭವ ಮಂಟಪದಲ್ಲಿ ನೆರೆಯುವ ಆ ಸಭೆಯಲ್ಲಿ ಅನುಭವ ಗೋಷ್ಠಿಗಳಲ್ಲದೆ ಇನ್ನಾವ ಮಾತುಗಳಿಗೂ ಎಡೆ ಇರಲಿಲ್ಲ. ಅಲ್ಲಿ ಅರಸರೂ ಇದ್ದರು ಆಳುಗಳೂ ಇದ್ದರು, ಪಂಡಿತರೂ ಇದ್ದರು, ಪಾಮರರೂ ಇದ್ದರು,

ಗಂಡಸರೂ ಇದ್ದರು ಹೆಂಗಸರೂ ಇದ್ದರು. ಮಹಿಳೆಯರಲ್ಲಿ ಮುಖ್ಯರಾದ ಶರಣೆಯರೆಂದರೆ ಅಕ್ಕಮಹಾದೇವಿ, ಕದಿರು ಕಾಯಕದ ರೆಮ್ಮವ್ವೆ, ಮುಕ್ತಾಯಕ್ಕ, ನೀಲಕ್ಕ, ನಿಂಬೆಕ್ಕ, ಗಂಗಾದೇವಿ, ಲಿಂಗಮ್ಮ ಮೊದಲಾದ ೨೫–೩೦ ಜನ ಹೆಣ್ಣುಮಕ್ಕಳು ಭಾಗವಹಿಸಿ ಕಾರ್ಯ ಮಾಡಿದುದು ಸಾಮಾನ್ಯವಲ್ಲ. ಇವರೆಲ್ಲರೂ ವಚನಗಳನ್ನು ರಚಿಸಿದ್ದಾರೆ.

ಅಕ್ಕಮಹಾದೇವಿ, ಮುಕ್ತಾಯಕ್ಕ, ಲಕ್ಕಮ್ಮ ಮೊದಲಾದವರು ವೇದಾಂತಿಗಳಾಗಿದ್ದರು. ಅವರ ವಚನಗಳು ಗಂಭೀರವಾಗಿದ್ದು ಓದುಗರನ್ನು ಮುಗ್ಧರನ್ನಾಗಿ ಮಾಡುವ ಮೋಹಕ ಗುಣ ಅವುಗಳಲ್ಲಿದೆ. ಶೂನ್ಯ ಸಂಪಾದನೆಯಲ್ಲಿ ಇವರ ಸಂಪಾದನೆಗಳು ಬಹಳ ಉತ್ಕೃಷ್ಟಗಳಾಗಿರುತ್ತವೆ.

ಮುಕ್ತಾಯಕ್ಕನು ಪ್ರಭುದೇವರ ಕೂಡ ಮಾಡಿದ ಸಂಭಾಷಣೆ ಎಂತಹ ಪಂಡಿತರನ್ನಾದರೂ ತಲೆದೂಗಿಸದೆ ಬಿಡುವುದಿಲ್ಲ.

ಹೆಣ್ಣುಮಕ್ಕಳು ಇಂತಹ ಯೋಗ್ಯತೆಯ ಸಂಪನ್ನೆಯರಾಗಬೇಕಾದರೆ ತಕ್ಕ ಪರಿಸರವೂ ಬೇಕಾಗುತ್ತದೆ. ಈ ಪರಿಸರವನ್ನು ಒದಗಿಸಿ ಕೊಟ್ಟವರು ಬಸವಣ್ಣನವರು. ಶಿವಾನುಭವ ಮಂಟಪದಲ್ಲಿ ಹೆಣ್ಣುಮಕ್ಕಳಿಗೂ ಸಹ ಉತ್ಕೃಷ್ಟವಾದ ಅನುಭವ ದೊರೆಯಿತು. ಇದರಿಂದ ಅವರ ಯೋಗ್ಯತೆಯೂ ಅಧಿಕವಾಗತೊಡಗಿತು. ಇದರಿಂದ ನಮಗೆ ವೇದ್ಯವಾಗುವ ಒಂದಂಶವೆಂದರೆ ಬಸವಣ್ಣನವರ ದೂರದೃಷ್ಟಿಯೇ ಕಾರಣವೆನ್ನಬಹುದು.

ಮಹಾದೇವಿಯಕ್ಕ ಭಾರತದ ಸುಪ್ರಸಿದ್ಧ ವೈರಾಗಿಣಿಯರಲ್ಲಿ ಅಗ್ರೇಸರರಾಗಿದ್ದಾರೆ. ಅವರಿಗಾದರೂ ಶಿವಾನುಭವ ಮಂಟಪದಲ್ಲಿ ಅನುಭವ ಶಿಕ್ಷಣವೇ ಮೂಲ ಕಾರಣವಾಗಿರುತ್ತದೆ. ಬಸವಣ್ಣನವರು ಸ್ತ್ರೀಯರಿಗೂ ಸಹ ಅನಿರ್ಬಂಧ ಪ್ರವೇಶವನ್ನು ಇಡದೇ ಇದ್ದರೆ ಆಗಿನ ಕಾಲದಲ್ಲಿ ಇಂತಹ ದಿವ್ಯ ಸ್ತ್ರೀ ರತ್ನಗಳು ದೊರೆಯುತ್ತಿರಲಿಲ್ಲ. ಅವರ ವೇದಾಂತಾನುಭಾವವು ಪ್ರಭುದೇವರಂತಹ ವೈರಾಗ್ಯ ಚಕ್ರವರ್ತಿಗಳ ತಲೆ ತೂಗಿಸಿತು. ಶೂನ್ಯ ಸಂಪಾದನೆಯಲ್ಲಿ ಅವರಿಗೂ ಪ್ರಭುಗಳಿಗೂ ನಡೆದ ಸಂವಾದವು ಚಿತ್ತಾಕರ್ಷಕವಾಗಿರುವುದಲ್ಲದೆ ಮನೋವೇದಕವೂ ಆಗಿರುತ್ತದೆ.

ಬಸವಣ್ಣನವರು ಅನೇಕ ಮಹಿಳೆಯರಿಗೆ ಅತ್ಯುನ್ನತವಾದ ಮನ್ನಣೆ ಕೊಟ್ಟುದೇ ಇಂತಹ ಅನೇಕ ಶರಣೆಯರ ಚರಿತ್ರೆಗಳು ಬೆಳಕಿಗೆ ಬರಲು ಕಾರಣವಾಯಿತು.

ಬಸವಣ್ಣನವರು ಸ್ತ್ರೀಯರ ವಿಷಯದಲ್ಲಿ ಅನೇಕ ವಚನಗಳನ್ನು ಹೇಳಿದ್ದಾರೆ. ಅವರು ಪರಸ್ತ್ರೀಯರ ವಿಷಯದಲ್ಲಿ ಬಹಳ ಅಂಜಿಕೆಯಿಂದ ನಡೆದುಕೊಂಡಿದ್ದು ತಿಳಿದು ಬರುತ್ತದೆ. ಅವರ ಒಂದು ವಚನವನ್ನು ಈ ವಿಷಯದಲ್ಲಿ ನೋಡೋಣ.

"ಹರಿವ ಹಾವಿಗೆ ಅಂಜೆ, ಉರಿವ ನಾಲಿಗೆ ಗಂಜೆ,
ಸುರಗಿಯ ಮೊನೆ ಗಂಜೆ, ಒಂದಕ್ಕಂಜುವೆ,
ಒಂದಕ್ಕಳಕುವೆ. ಪರಸ್ತ್ರೀ ಪರಧನವೆಂಬೀ
ಜೂಜಿಗಂಜುವೆ, ಮುನ್ನಂಜದ ರಾವಣನೇ
ವಿಧಿಯಾದ ಅಂಜುವೆನಯ್ಯ ಕೂಡಲ ಸಂಗಮದೇವಾ"

ಪರಸ್ತ್ರೀಯರಿಗೆ ಮಾತ್ರ ಅಂಜುವೆನಯ್ಯ ಎಂಬ ಅವರ ವೀರವಾಣಿಯು, ಅವರು ಮಹಿಳೆಯರ ಬಗ್ಗೆ ಇಟ್ಟಿದ್ದ ಗೌರವವನ್ನು ಸೂಚಿಸುತ್ತದೆ.

ಅಕ್ಕಮಹಾದೇವಿ ಹೆಣ್ಣುಮಗಳಾದರೂ ಬಸವಣ್ಣನವರಿಂದ ಅವರ ದಯೆಯಿಂದಲೇ ತನಗೆ ಇಂತಹ ಯೋಗ್ಯತೆ ಬಂದಿತೆಂದು ಹೇಳಿರುತ್ತಾರೆ. ಬಸವಣ್ಣನವರು ಹೆಣ್ಣಿಗೆ ಹೆಚ್ಚಿನ ಮರ್ಯಾದೆಯನ್ನು ಕೊಟ್ಟಿದ್ದರು. ಅಕ್ಕನ ಈ ಒಂದು ವಚನವನ್ನು ಅವಲೋಕಿಸುವ.

"ಕಾಮಾ ಗೆಲಿದೆನು ಬಸವ ನಿಮ್ಮ ದಯೆಯಿಂದ,
ಸೋಮಧರನ ಹಿಡಿ ತಪ್ಪೆನು ಬಸವ ನಿಮ್ಮ ಕೃಪೆಯಿಂದ,
ನಾಮದಲ್ಲಿ ಹೆಂಗುಸೆಂಬ ಹೆಸರಾದರೇನು
ಭಾವಿಸಲು ಗಂಡುರೂಪು ಅತಿಕಾಮಿ ಚನ್ನಮಲ್ಲಿಕಾರ್ಜುನಂಗೆ
ತೊಡರಕ್ಕಿ ಎರಡುವರಿಯದೆ ಕೂಡಿದೆನು ಬಸವ ನಿಮ್ಮ ಕೃಪೆಯಿಂದ

ಇದರಂತೆ ಅಕ್ಕಮಹಾದೇವಿ ಬಸವಣ್ಣನವರ ಕೃಪೆಯೇ ನನ್ನ ಉದ್ಧಾರಕ್ಕೆ ಕಾರಣವೆಂದು ಅನೇಕ ವಚನಗಳಲ್ಲಿ ಹೇಳಿದ್ದಾಳೆ.

ಬಸವಣ್ಣನವರು ಸ್ತ್ರೀ ಸಮಾಜಕ್ಕೆ ಸಮಾನ ಸ್ವಾತಂತ್ರ್ಯವನ್ನು ಕೊಟ್ಟು ಲೋಕದಲ್ಲಿ ಕೀರ್ತಿಕಾಯರಾಗಿರುತ್ತಾರೆ.

ಬಸವಣ್ಣನವರ ದೃಷ್ಟಿಯಲ್ಲಿ ಮಹಿಳೆ ಪೂಜನೀಯಳಾಗಿದ್ದಾಳೆ. ಅವಳೂ ಸಹ ಪುರುಷನಂತೆ ಧಾರ್ಮಿಕಾಧಿಕಾರಕ್ಕೆ ಸಮರ್ಥಳೆಂದು ಭಾವಿಸಿದ್ದರು. ಪುರುಷರಿಗೆ ಕೊಡುವಷ್ಟೇ ಗೌರವವನ್ನು ಮಹಿಳೆಯರಿಗೂ ಸಹ ಅನುಭವ ಮಂಟಪದಲ್ಲಿ ಕೊಟ್ಟು ಮಹಿಳೆಯರ ಬೌದ್ಧಿಕ ಮತ್ತು ಧಾರ್ಮಿಕ ಏಳ್ಗೆಗಾಗಿ ನೆರವು ನೀಡಿ ಮಾರ್ಗದರ್ಶನ ಮಾಡಿದ ಮಹಾನ್ ವ್ಯಕ್ತಿ ಬಸವಣ್ಣನವರು ೮೦೦ ವರ್ಷಕ್ಕೆ ಮುನ್ನ ಮಹಿಳೆಯರಿಗೆ ಸಮಾಜದಲ್ಲಿ ಯಾವ ವಿಧವಾದ ಸ್ವಾತಂತ್ರ್ಯವೂ ಇರಲಿಲ್ಲ ಅಂತಹ ಕಾಲದಲ್ಲಿ ಬಸವಣ್ಣನವರು ಸ್ತ್ರೀ ಸಮಾಜಕ್ಕೆ ಗೌರವ ಕೊಟ್ಟಿರುವುದು ಅವರ ದೂರದರ್ಶಿತ್ವದ ಹೆಗ್ಗುರುತಾಗಿದೆ. ಪುರುಷ ಮತ್ತು ಮಹಿಳೆ ಈರ್ವರೂ ಸಹ ಸಮಾಜದ ಏಳ್ಗೆಗೆ ಅನಿವಾರ್ಯ ಎಂಬ ಭಾವದಿಂದ ಬಸವಣ್ಣನವರು ಈರ್ವರಿಗೂ ಸಮಾನವಾದ ಅಧಿಕಾರವನ್ನು ನೀಡಿ ಅದನ್ನು ಕಾರ್ಯರೂಪಕ್ಕೆ ಬರುವಂತೆಯೂ ಮಾಡಿ ಸರ್ವ ಜನಾಂಗದ ಪ್ರಶಂಸೆಗೆ ಪಾತ್ರವಾಗಿದ್ದಾರೆ, ಮತ್ತು ಪ್ರಾತಃಸ್ಮರಣೀಯರಾಗಿದ್ದಾರೆ.,

# ಬರಿದಾಗುತ್ತಿರುವ ಬೆಳ್ಳಿ ಭಂಡಾರ

ಪ. ರಾಮಕೃಷ್ಣ ಶಾಸ್ತ್ರಿ
"ಶಿವಶಕ್ತಿ ನಿಲಯ"
ಅಂಚೆ: ಮಾಚ್ಚಿನ-574295 (ದ.ಕ.)

ಆಭರಣ ಪ್ರಿಯರನ್ನು ಬಂಗಾರದ ಅನಂತರ ಆಕರ್ಷಿಸಿರುವ ಲೋಹವೆಂದರೆ ಬೆಳ್ಳಿಯೇ ಸರಿ. ಇಂದು ಬೆಳ್ಳಿಯ ಬೆಲೆ ಬಂಗಾರದೊಂದಿಗೆ ಪೈಪೋಟಿ ನಡೆಸಿ ಮುಂದೆ ಸಾಗಿದೆ. ಜಗತ್ತಿನಲ್ಲಿ ಅತ್ಯಧಿಕ ಬೆಳ್ಳಿಯನ್ನು ಉಪಯೋಗಿಸುವವರು ಭಾರತೀಯರು ಎಂದು ಹೇಳುತ್ತಾರೆ. ಪಾಶ್ಚಾತ್ಯ ತಜ್ಞರು ಹೈದರಾಬಾದಿನ ನಿಜಾಮರೊಬ್ಬರ ಬಳಿಯಲ್ಲೇ ಗ್ರೀಸಿನಿಂದ ತರಿಸಿದ ಟನ್ನುಗಟ್ಟಲೆ ಬೆಳ್ಳಿಯ ಒಡವೆಗಳ ಸಂಗ್ರಹಗಳಿದ್ದುವು. ನಾಣ್ಯಗಳು, ಪಾತ್ರೆಗಳು, ವಿಗ್ರಹಗಳು, ಅಲಂಕಾರ ಸಾಮಗ್ರಿಗಳಿಗಾಗಿ ನಮ್ಮ ದೇಶದಲ್ಲಿ ಇದೂವರೆಗೆ ಒಂದೂವರೆ ಲಕ್ಷ ಟನ್ ಬೆಳ್ಳಿಯನ್ನು ಉಪಯೋಗಿಸಲಾಗಿದೆ ಎಂದು ಅಂಕಿ ಅಂಶಗಳ ಪರಿಣತರ ಹೇಳಿಕೆ. ಸಮಾರಂಭಗಳಲ್ಲಿ ಉಡುಗೊರೆ ನೀಡಲು ಬೆಳ್ಳಿಯ ಉಪಕರಣಗಳ ಹೆಚ್ಚಿನ ಆದ್ಯತೆ. ವೇಲ್ಸ್‌ನ ರಾಜಕುಮಾರರು ೧೮೭೫ರಲ್ಲಿ ಭಾರತಕ್ಕೆ ಭೇಟ್ಟಿಯಿತ್ತಾಗ ಪಾಟಿಯಾಲಾ ಸಂಸ್ಥಾನದ ಮಹಾರಾಜರು ಅವರ ಸತ್ಕಾರಕ್ಕಾಗಿ ಅದ್ಧೂರಿಯ ಏರ್ಪಾಟುಗಳನ್ನು ಕೈಗೊಂಡು, ಸ್ನಾನದ ಕೋಣೆಯಲ್ಲಿಯೂ ಬೆಳ್ಳಿಯ ಉಪಕರಣಗಳನ್ನು ಒದಗಿಸಿದ್ದರು.

ಬಹು ಹಿಂದಿನಿಂದಲೇ ಬೆಳ್ಳಿಯನ್ನು ನಾಣ್ಯ ತಯಾರಿಕೆಗೆ ಬಳಸಲಾಗುತ್ತಿತ್ತು. ಬೆಳ್ಳಿಯ ಮೊತ್ತಮೊದಲ ನಾಣ್ಯ ಕ್ರಿಸ್ತಪೂರ್ವ ೬೨೦ರಲ್ಲಿ ಏಷ್ಯಾ ಮೈನರ್‌ನ ಅಡಿಯದಲ್ಲಿ ತಯಾರಾಯಿತೆಂದು ಕೆಲವು ಇತಿಹಾಸಜ್ಞರ ಅಂದಾಜು. ಬೆಳ್ಳಿಯ ಆಕರ್ಷಕ ವಸ್ತು ವೈವಿಧ್ಯಗಳ ತಯಾರಿಕೆಗೆ ಒರಿಸ್ಸಾದ ಕಲಾಪರಿಣತರು ಪ್ರಸಿದ್ಧರಾಗಿದ್ದಾರೆ. ಶುದ್ಧವಾದ ಬೆಳ್ಳಿಯಿಂದ ತಯಾರಿಸಿದ ವಸ್ತುಗಳು ಕ್ರಮಶಃ ಸವೆದು ಹೋಗುತ್ತವೆ. ಆದ್ದರಿಂದ ಉಡಿದಾರದ ಸರಿಗೆ, ತಾಯಿತದ ತಗಡು ಮುಂತಾದುವುಗಳನ್ನು ನಿರ್ಮಿಸಲೆಂದೇ "ಸ್ಟರ್ಲಿಂಗ್" ಎಂಬ ವಿಶೇಷ ಬೆಳ್ಳಿಯನ್ನು ತಯಾರಿಸುತ್ತಾರೆ. ಅದರಲ್ಲಿ ಪ್ರತಿಶತ ಏಳೂವರೆ ಪಾಲು ತಾಮ್ರವನ್ನು ಬೆರೆಸಿರುವುದೊಂದು ವೈಶಿಷ್ಟ್ಯ. ಆಧುನಿಕ ಜನಜೀವನದಲ್ಲಿ ಬೆಳ್ಳಿ ಒಂದಿಲ್ಲೊಂದು ವಿಧದಲ್ಲಿ ಬಹೂಪಯೋಗಿಯಾಗಿದೆ. ಮುತ್ತೈದೆ ಹೆಂಗಸರ ಕಾಲುಂಗುರವೂ ಬೆಳ್ಳಿಯಿಂದಲೇ ತಯಾರಾಗುವುದು.

ಗ್ರೀಸಿನ ಗಣಿಗಳಿಂದ ಹೇರುಗಟ್ಟಲೆ ಬೆಳ್ಳಿಯನ್ನು ಸಾಗಿಸಿ ಸಾಮ್ರಾಟ ಅಲೆ

ಗ್ಯಾಂಡರ್ ನಾಣ್ಯ ತಯಾರಿಕೆಗೆ ಬಳಸುತ್ತಿದ್ದನೆಂಬುದಕ್ಕೆ ದಾಖಲೆಗಳಿವೆ. ಭಾರತಕ್ಕೆ ಕೆಲವು ವರ್ಷಗಳ ಹಿಂದಿನವರೆಗೆ ಪ್ರತಿ ವರ್ಷಕ್ಕೂ ಒಂದು ಕೋಟಿ ಪವನು ಬೆಳ್ಳಿಯನ್ನು ವಿದೇಶಗಳ ಗಣಿಗಳಿಂದ ತರಿಸಲಾಗುತ್ತಿತ್ತು. ಆದರೆ ಈಗ ಆಮದಿನ ಪ್ರಮಾಣ ಪ್ರತಿಶತ ಐದಕ್ಕೆ ಇಳಿದಿದೆ. ಯುರೋಪಿನ ಜನರನ್ನು ಬಹುಸಂಖ್ಯೆಯಲ್ಲಿ ಅಮೇರಿಕೆಯತ್ತ ಆಕರ್ಷಿಸಿದ್ದು ಇನ್ಕಾ ಮತ್ತು ಅಜ್‌ಟಾಕ್‌ಗಳಲ್ಲಿದ್ದ ಬೆಳ್ಳಿಯ ಗಣಿಗಳು ಇದರ ಆಸೆಯಿಂದ ಬಂದ ಅನೇಕ ಜನರು ಸ್ಪಾನಿಷರು ಅವರು ಕಾಡುಜನರಿಗೆ ಬಲಿಯಾದರು.

ಬೆಳ್ಳಿ ಅಸಂಖ್ಯ ಉಪಯೋಗಗಳಿಗೆ ಇಂದು ಅತ್ಯವಶ್ಯಕವಾಗಿದೆ. ಅತ್ಯಧಿಕವಾಗಿ ಅದು ಬಳಸಲ್ಪಡುವುದು. ಛಾಯಾಚಿತ್ರಗಳಿಗೆ ಬೇಕಾಗುವ ಫಿಲ್ಮುಗಳ ತಯಾರಿಕೆಗೆ ಎಕ್ಸ್‌ರೇ ಫೋಟೋಗಳಿಗೂ ಬೆಳ್ಳಿ ಬೇಕೇ ಬೇಕು. ಇದೇ ಕಾರಣದಿಂದ ಸಿನಿಮಾ ಪರದೆ ರಜತಪರದೆ ಎಂಬ ಅಭಿದಾನ ಪಡೆಯಿತೋ ಏನೋ. ಫಿಲ್ಮ್‌ಗಳನ್ನು ಲ್ಯಾಬೋರೆಟರಿಗಳಲ್ಲಿ ಸಂಸ್ಕರಿಸಿದ ಮೇಲೆ ಬೆಳ್ಳಿಯ ಸಂಗ್ರಹವು ದೊಡ್ಡ ಪ್ರಮಾಣದಲ್ಲಿ ಸಿಗುತ್ತದೆ.

ವೈದ್ಯ ಶಾಸ್ತ್ರದಲ್ಲಿ ಬೆಳ್ಳಿಯ ಉಪಕಾರ ಅಗಣಿತ. ಬೆಳ್ಳಿಯ ನೂಲುಗಳಿಂದ ಗಾಯಗಳನ್ನು ಹೊಲಿಯುತ್ತಿದ್ದರು. ಕೃತಕ ಹಲ್ಲುಗಳನ್ನು ಕಟ್ಟಿಸಿಕೊಳ್ಳುತ್ತಿದ್ದರು. ಮೂಳೆಗಳು ಮುರಿದರೆ ಬೆಳ್ಳಿಯ ತಂತಿಗಳಿಂದ ಜೋಡಿಸುತ್ತಿದ್ದರು ತಲೆಬುರುಡೆ ಘಾಸಿಗೊಂಡಾಗ ಆ ಭಾಗದ ಮಾಂಸವನ್ನು ಕಿತ್ತುಹಾಕಿ ಖಾಲಿ ಭಾಗವನ್ನು ಬೆಳ್ಳಿಯಿಂದ ತುಂಬಲಾಗುತ್ತಿತ್ತು. ಬೆಂಕಿಯಿಂದ ಆದ ಗಾಯಗಳು ಮಾಯಲು ತಯಾರಿಸುವ ಔಷಧಿಯಲ್ಲಿ ಸ್ವಲ್ಪಮಟ್ಟಿಗೆ ಬೆಳ್ಳಿಯನ್ನೂ ಸೇರಿಸಲಾಗುತ್ತದೆ. ಆರೋಗ್ಯ ಸಂರಕ್ಷಣೆಯಲ್ಲಿ ಬೆಳ್ಳಿ ಎಂಥ ಮಹತ್ವದ ಪಾತ್ರ ವಹಿಸಿದೆಯೆಂದರೆ ಚಿಕ್ಕಮಕ್ಕಳನ್ನು ಬಾಧಿಸುವ ಕುರುಡುತನವನ್ನು ನಿವಾರಿಸಲು ಅವರ ಕಣ್ಣುಗಳಿಗೆ ಸಿಂಪಡಿಸುವ ದ್ರಾವಣವು ಶೇ. ಒಂದರಷ್ಟು ಬೆಳ್ಳಿಯ ನೈಟ್ರೇಟ್‌ನಿಂದ ಕೂಡಿದೆ.

ವಿದ್ಯುತ್ ವಾಹಕಗಳ ತಯಾರಿಕೆಗೆ ಇತರ ಲೋಹಗಳಿಗಿಂತ ಬೆಳ್ಳಿ ಹೆಚ್ಚು ಶಕ್ತಿಶಾಲಿ ಎಂಬುದು ಮನದಟ್ಟಾಗಿದೆ. ಆದರಿಂದ ನೀರನ್ನು ಶುದ್ಧೀಕರಿಸುವ ದ್ರಾವಕವೊಂದು ಸಿದ್ಧಗೊಳ್ಳುತ್ತದೆ. ಒಂದು ಚಮಚ ತುಂಬ ಬೆಳ್ಳಿಯ ಸತ್ವ ಎರಡೂವರೆ ಸಹಸ್ರ ಕೋಟಿ ಲೀಟರು ನೀರಿನಲ್ಲಿರುವ ಕ್ರಿಮಿಗಳನ್ನು ನಾಶ ಮಾಡುವ ಸಾಮರ್ಥ್ಯ ಹೊಂದಿದೆ. ಉಕ್ಕಿನ ತಗಡುಗಳನ್ನು ಬಹು ಶೀಘ್ರವಾಗಿ ಕರಗಿಸುವ ಕುಲುಮೆಗಳಲ್ಲಿ ಬೆಳ್ಳಿಯ ಕನ್ನಡಿಗಳ ಬಳಕೆ ಹೆಚ್ಚು. ಫ್ರಾನ್ಸ್ ದೇಶದ ಒಡಲ್ಲೊ ಎಂಬಲ್ಲಿರುವ ಸೋಲಾರ್ ಎನರ್ಜಿ ಲ್ಯಾಬೋರೇಟರಿಯಲ್ಲಿ ಸೂರ್ಯ ಶಕ್ತಿಯನ್ನು ಭಾರೀ ಕುಲುಮೆಯಲ್ಲಿ ಸಂಗ್ರಹಿಸಿಡಲು ಗಾಜಿನ ಲೇಪನ ಹಚ್ಚಿದ ಈ ಕನ್ನಡಿಗಳನ್ನು ನಿಯೋಜಿಸಲಾಗಿದೆ. ಇದು ಒದಗಿಸುವ ೩೮೦೦ ಡಿಗ್ರಿ ಸೆಂಟಿಗ್ರೇಡ್ ವರೆಗಿನ ಶಾಖದಿಂದ ಎಂಥ

ಘನವಾದ ಉಕ್ಕು ಕೂಡ ಕರಗಿ ನೀರಾಗುವುದು. ವಿಮಾನಯಾನ, ಕಂಪ್ಯೂಟರುಗ
ಕಾರ್ಯ ನಿರ್ವಹಣೆಯಲ್ಲೂ ಬೆಳ್ಳಿಯ ಪಾತ್ರ ಹಿರಿದು. ಮೋಟಾರು ಕಾರುಗಳನ್ನು
ಚಾಲೂ ಮಾಡುವ ಗುಂಡಿಯನ್ನು ನಿರ್ಮಿಸಲು ಶೇ. ಹತ್ತರಷ್ಟು ಕಾಡ್ಮಿಯ
ಸಂಯುಕ್ತ ಬೆಳ್ಳಿ ಬೇಕಾಗುತ್ತದೆ!

ಗನಿಗಳಲ್ಲಿ ಸಾವಿರದಿಂದ ೧೩೦೦ ಮೀಟರಿನವರೆಗೆ ಭೂಗರ್ಭವನ್ನು ಆಳವಾ
ಕೊರೆದು ಬೆಳ್ಳಿಯ ಅದಿರುಗಳನ್ನು ತೆಗೆಯಲಾಗುತ್ತದೆ. ಒಂದು ಕೆ ಜಿ ಶುದ್ಧವಾದ
ಬೆಳ್ಳಿ ಸಿಗಬೇಕಾದರೆ ಸುಮಾರು ೩೨ ಟನ್ನು ಅದಿರನ್ನು ಶುದ್ಧೀಕರಿಸಬೇಕು. ಎರ
ಡನೆಯ ಮಹಾಯುದ್ಧದ ಕಾಲದಲ್ಲಿ ಅಣು ಸ್ಫೋಟನೆಯ ಸಂಶೋಧನಾ ಪ್ರಯೋಗಗಳಿ
ಅಮೇರಿಕವು ನಲನತ್ತು ಕೆ.ಜಿ. ಬೆಳ್ಳಿಯನ್ನು ಉಪಯೋಗಿಸಿತ್ತು. ಪ್ರಯೋಗದ
ಬಳಿಕ ಅದನ್ನು ಕರಗಿಸಿ ಮೊದಲಿನ ಸ್ಥಿತಿಗೇ ತಂದಾಗ ಸ್ವಲ್ಪವೂ ಕಮ್ಮಿಯಾಗಿರಲಿಲ್ಲ
ವಾದರೂ ಅದರಿಂದ ದೊಡ್ಡ ಲಾಭವೂ ಆಯಿತು.

ಬಹು ಕಾಲದವರೆಗೆ ಬೆಳ್ಳಿಯನ್ನು ಯಾರೂ ಕೇಳುವವರೇ ಇಲ್ಲದ ಹಾಗಿತ್ತು.
೧೯೭೩ರಲ್ಲಿ ಜಾಗತಿಕ ಮಾರುಕಟ್ಟೆಯಲ್ಲಿ ಅದರ ಬೆಲೆ ಏರಿದಾಗ ಭಾರತ ಮತ್ತು ಪಾ
ಸ್ಥಾನಗಳಿಂದ ಎಂಟುನೂರು ಟನ್ ಬೆಳ್ಳಿ ಸಾಗಿಸಲ್ಪಟ್ಟಿರಬಹುದೆಂದು ಹೇಳುತ್ತಾರೆ
ನಮ್ಮ ದೇಶದಲ್ಲಿ ರಾಂಚಿ, ಬಿಹಾರಿನ ಹಜರಿಬಾಗ್ ಮತ್ತು ಪಾಲಮೊವ್‌ಗಳಲ್ಲಿ
ಸೀಸದ ಅದಿರುಗಳಲ್ಲಿ ಕೆಲವೆಡೆ ತಾಮ್ರದ ಅದಿರುಗಳಲ್ಲಿ ಸ್ವಲ್ಪಾಂಶ ಬೆಳ್ಳಿ ಬೆರೆತಿದೆ
ಹಿಮಾಚಲ ಪ್ರದೇಶದ ಹನ್ನೊಂದು ಸಾವಿರ ಅಡಿ ಎತ್ತರದ ಚಾರ್‌ಗಾಂವ್ ಮತ್ತು
ಸಟ್ಲೆಜ್ ಕಣಿವೆಯಲ್ಲಿ ಬೆಳ್ಳಿಯ ನಿಕ್ಷೇಪವಿದೆಯಾದರೂ ಅದನ್ನು ತೆಗೆಯುವುದು ತೀ
ಅಸಾಧ್ಯ. ಇನ್ನು ೨೦ ವರ್ಷಗಳಲ್ಲಿ ಜಗತ್ತಿನ ಬೆಳ್ಳಿ ಭಂಡಾರವೆಲ್ಲ ಬರಿದಾಗಬಹು
ದೆಂದು ಆತಂಕ ಪಡುತ್ತಾರೆ ತಜ್ಞರು.

# ಕಳವಳ

ಬಿ. ಸುಬ್ರಾಯ ಅಡಿಗ
ನಿವೃತ್ತ ಉಪಾಧ್ಯಾಯರು ಸಂಪೂರು-(583119

ನೀವು ಹೆಜ್ಜೆ ಹೆಜ್ಜೆಗೆ ಕಳವಳಗೊಳ್ಳುತ್ತೀರಾ? ಹಾಗಿದ್ದರೂ ನೀವೇನೂ ಗಾಬರಿಯಾಗಬೇಕಿಲ್ಲ.... ಅದನ್ನು ಹೋಗಲಾಡಿಸಲು ನೀವು ಯತ್ನಿಸಬೇಕಷ್ಟೇ.

ನಮ್ಮ ಚಿಂತೆಗಳಾಗಲೀ ಕಳವಳಗಳಾಗಲೀ ದೊಡ್ಡ ದೊಡ್ಡ ಘಟನೆಗಳಿಂದ ಉಂಟಾಗಿರದೆ ಸಣ್ಣ ಸಣ್ಣ ಸಂಗತಿಗಳಿಂದಲೇ ಹುಟ್ಟಿಕೊಳ್ಳುತ್ತವೆ ಅಂತಹ ಸಂಗತಿಗಳನ್ನು ಹೋಗಲಾಡಿಸಿಕೊಂಡರೆ, ನಾವು ಹೊಸ ಮನುಷ್ಯರಾಗಬಹುದು.

ಕ್ಷುಲ್ಲಕ ಸಂಗತಿಗಳೇ ಮಾನಸಿಕ ಆಘಾತಕ್ಕೆ ಕಾರಣವೆನಿಸಿ, ನರಳುವ ಎಷ್ಟೋ ಜನರನ್ನು ನೀವು ಅರಿತಿರಬಹುದು. ಅಂತಹವರು ಮಿತ್ರಮಂಡಲಿಯಲ್ಲಿ ಕುಳಿತಿದ್ದರೂ ಸಣ್ಣ ಸಣ್ಣ ಮಾತುಗಳಿಂದಾಗಿ ಸಿಟ್ಟಿಗೆದ್ದು ಇತರರ ವೈಮನಸ್ಯಕ್ಕೆ ಗುರಿಯಾಗುತ್ತಾರೆ. ಸಂದರ್ಭಾನುಸಾರ ಯಾರ ಕುರಿತೋ ಹೇಳಿದ ಮಾತನ್ನು ತನಗೇ ಅನ್ವಯಿಸಿಕೊಂಡು ಕೊರಗುವ ಮೂರ್ಖನಿಗೇನೆನ್ನಬೇಕು?

ಸಣ್ಣ ಸಮಾರಂಭವೊಂದಕ್ಕೆ ಆಮಂತ್ರಣ ನೀಡಿದುದರಿಂದಲೇ ವೈಮನಸ್ಯ ಕಟ್ಟಿಕೊಂಡ ಮನುಷ್ಯನನ್ನೇ ನಾನು ಬಲ್ಲೆ. ಆಮಂತ್ರಣ ಕೊಟ್ಟಿದ್ದರೂ ಅಂದು ಆತ ಅಲ್ಲಿಗೆ ಹೋಗುತ್ತಿರಲಿಲ್ಲ. ಆದರೆ ತನ್ನನ್ನು ಉದ್ದೇಶಪೂರ್ವಕವಾಗಿಯೇ ಕಡೆಗಣಿಸಲಾಯಿತೆಂದು ಆತ ಕೊರಗುತ್ತಲೇ ಇದ್ದಾನೆ.

ಆ ಮನುಷ್ಯನಲ್ಲಿ ಹೀನತಾಭಾವ ಅದೆಷ್ಟು ತುಂಬಿದೆಯೆಂದರೆ ಎಂಥ ಸಂದರ್ಭ ಇದ್ದರೂ ಮುಖ ಉಬ್ಬಿಸಿ ಕುಳಿತಿರುತ್ತಾನೆ. ಅವನ ಬಗ್ಗೆ ಯಾರಾದರೂ ಪ್ರಸ್ತಾಪಿಸಿದರೆ ಸಾಕು; ಅವನ ಮನಃಶಾಂತಿ ಕದಡುತ್ತದೆ, ಮತ್ತು ಹಲವು ದಿನಗಳವರೆಗೆ ಚಿಂತಿಸುತ್ತ ಕುಳಿತುಕೊಳ್ಳುತ್ತಾನೆ. ಅವನು ತುಂಬಾ ಬುದ್ಧಿವಂತನಿರುವುದರಿಂದ ಅವನನ್ನು ಬಲ್ಲ ಜನ—'ಇಷ್ಟು ಕ್ಷುದ್ರವಿಚಾರಕ್ಕಾಗಿ ಇವನೇಕಿಷ್ಟು ತಲೆ ಬಿಸಿ ಮಾಡಿಕೊಳ್ಳುತ್ತಿದ್ದಾನೆ!— ಎಂದು ವಿಸ್ಮಯಪಡುತ್ತಾರೆ.

ನೀವು ಇಂಥ ಸಣ್ಣಪುಟ್ಟ ವಿಚಾರಗಳಿಗೆ ಹೆದರುತ್ತೀರಾ? ನಿರಾಶೆ, ಅಸಫಲತೆ ಹಾಗೂ ಆರ್ಥಿಕ ಅಡಚಣೆಗಳು ನಿಮ್ಮನ್ನು ಹಣ್ಣು ಮಾಡುತ್ತವೆಯೇ? ನೀವು

ಯಾವುದಾದರೂ ಅಹಿತಕರ ವಿಚಾರದ ಕಲ್ಪನೆಯಿಂದಲೇ ಹೆದರಿ ಕ್ಷುಬ್ಧರಾಗುತ್ತೀರಾ? ಹಾಗಿದ್ದರೆ ಅವನ್ನೆಲ್ಲ ಮರೆತುಬಿಡಲು ನೀವು ಯತ್ನಿಸಬೇಕು.

ಇವುಗಳಲ್ಲಿ ಏನೂ ಹುರುಳಿಲ್ಲವೆಂದು ನೀವು ಭಾವಿಸಬಹುದು. ಪ್ರಖ್ಯಾತ ಇತಿಹಾಸಕಾರ ಕಾರ್ಲೈಲ್ ಸಾಧಾರಣ ಘಟನೆಗಳಿಂದಲೇ ಅಶಾಂತರಾಗುತ್ತಿದ್ದರು. ನೆರೆಮನೆಯ ನೆರೆಯಾತ ಒಂದು ಕೋಳಿ ಸಾಕಿದ್ದ. ಅದು ಬೆಳಿಗ್ಗೆ ಆರು ಗಂಟೆಗೇ ಕೂಗುತ್ತಿತ್ತು. ರಾತ್ರಿ ಬಲುತಡವಾಗಿ ನಿದ್ದೆ ಹೋಗುವ ಅಭ್ಯಾಸವಿದ್ದ ಕಾರ್ಲೈಲ್‌ರಿಗೆ ಈ ಕೂಗು ತುಂಬ ತೊಂದರೆ ಕೊಡುತ್ತಿತ್ತು. ಇದರಿಂದ ಅಶಾಂತರಾಗಿ ಅವರು ಆ ಮನುಷ್ಯನ ಬಳಿ ದೂರಿಡಲು ಹೋದರು.

ಕೋಳಿಯ ಕೂಗು ನಿಮ್ಮ ನಿದ್ದೆ ಕೆಡಿಸುತ್ತದೆಯೆ—ಆತ ಪ್ರಶ್ನಿಸಿದ.

ಹಾಗೇನೂ ಇಲ್ಲ. ಕೋಳಿಯ ಕೂಗಿನ ಹೆದರಿಕೆಯೇ ನನ್ನನ್ನು ಎಚ್ಚರನಾಗಿಡುತ್ತದೆ—ಎಂದರು ಕಾರ್ಲೈಲ್:

ನಾನು ಬೆಳಿಗ್ಗೆ ಏಳಬೇಕಿದ್ದರೂ ಅಲಾರ್ಮ್ ಹಾಕಿಡುವುದಿಲ್ಲ ಏಕೆಂದರೆ ಹಾಗೆ ಹಾಕಿಟ್ಟರೆ ಅಲಾರ್ಮ್ ಈಗ ಬಾರಿಸುತ್ತದೆ. . ಇದೀಗ ಬಾರಿಸುತ್ತದೆ....ಎಂದು ಇರುಳಿಡೀ ನಿದ್ರೆಗೆಡುವ ಸಂಭವವಿದೆ.

ನಮ್ಮನ್ನು ಉತ್ತೇಜಿಸುವ ಹಲವಾರು ಘಟನೆಗಳು ಇದೇ ಮಾದರಿಯವು ಇಂಥ ಸಣ್ಣ ಸಂಗತಿಗಳೇ ನಮ್ಮ ಶಾಂತಿಯನ್ನು ಮಣ್ಣುಗೂಡಿಸುತ್ತವೆ. ದೊಡ್ಡ ವಿಪತ್ತುಗಳನ್ನು ನಾವು ಧೈರ್ಯವಾಗಿ ಇದಿರಿಸಬಲ್ಲೆವು. ಇವು ಮಾತ್ರ ಎಂದೂ ನಮ್ಮ ಹಿಡಿತಕ್ಕೆ ಸಿಗಲಾರವು.

ಕೋಳಿಯ ಕೂಗಿನ ಆಶಂಕೆಯಿಂದ ನಿದ್ದೆಗೆಡುತ್ತಿದ್ದ ಕಾರ್ಲೈಲರೇ 'ಫ್ರಾನ್ಸಿನ ರಾಜ್ಯಕ್ರಾಂತಿ'ಯ ಮೊದಲ ಭಾಗ ಮುಕ್ತಾಯವಾದಾಗ, ಅದನ್ನೋದಲು ಪ್ರಖ್ಯಾತ ಇತಿಹಾಸಜ್ಞರಿಗೆ ಕೊಟ್ಟರು. ಅವರ ಅಜ್ಞ ಸೇವಕ. ಅದೊಂದು ಅಪ್ರಯೋಜಕ ಪುಸ್ತಕವೆಂದು ಭಾವಿಸಿ ಸುಟ್ಟು ಹಾಕಿದ. ಪ್ರತಿ ಇಡದಿದ್ದ ಕಾರ್ಲೈಲ್ ಈ ಘಟನೆಯಿಂದ ಹೆಚ್ಚೇನೂ ಕಂಗೆಡಲಿಲ್ಲ. ಅದನ್ನು ತಯಾರಿಸಲು ಎಷ್ಟೋ ವರ್ಷಗಳು ತಗಲಿದ್ದವು ಆದರೂ ಅವರು ಪುನಃ ಅದನ್ನು ಬರೆಯಲಾರಂಭಿಸಿದರು !

ಯಾವುದಾದರೂ ವಿಧ್ವಂಸಕಭಾವ ಮನದಲ್ಲಿ ಮೂಡುತ್ತಲೇ ಅದನ್ನು ಗೆಲ್ಲಲು ಪ್ರಯತ್ನಿಸಬೇಕು. "ದುರ್ದಿನಗಳಿಗಿಂತ ಸುದಿನಗಳೇ ಹೆಚ್ಚಾಗಿವೆ. ಶತ್ರುಗಳಿಗಿಂತ ಮಿತ್ರರೇ ಹೆಚ್ಚಾಗಿದ್ದಾರೆ."—ಎಂದು ಭಾವಿಸಿಕೊಳ್ಳಬೇಕು.

ಆಗ ನೀವು ನಿಮ್ಮ ಕಲ್ಪಿತ ಕಷ್ಟಗಳಿಗಾಗಿ ಚಿಂತಿಸುವುದನ್ನು ಬಿಟ್ಟು, ಅವುಗಳ ವಜ್ರಮುಷ್ಟಿಯಿಂದ ಹೊರಬರುವಿರಿ. ಯಾವುದಾದರೂ ಉಪಯುಕ್ತ

ಕಾರ್ಯದಲ್ಲಿ ಮಗ್ನರಾಗುವುದು ತುಂಬ ಲಾಭಕಾರಿ. ಏಕೆಂದರೆ ಆ ವೇಳೆ ಯಾ
ದುರ್ಭಾವನೆಗೂ ನಿಮ್ಮಲ್ಲಿ ಎಡೆದೊರೆಯುವುದಿಲ್ಲ.

ಆತ್ಮಗ್ಲಾನಿ, ಅಸಫಲತೆ—ಮೊದಲಾದ ಭಾವನೆಗಳನ್ನು ದೂರಗೊಳಿಸಿ
.........ನಿಮ್ಮಲ್ಲಿ ವಿಶ್ವಾಸ ಮಾಡಿಸಿಕೊಂಡು ನಿರಾಶೆಯನ್ನು ಹೊಡೆದೋಡಿಸಿ
ಭಗವತ್ ಕೃಪೆಯ ಮೇಲೆ ನಂಬುಗೆಯಿಡಿರಿ. ನಿಮ್ಮ ಇಚ್ಛಿತ ವಸ್ತು ತಪ್ಪದೆ ದೊ
ಯುವುದೆಂದು ನಂಬಿರಿ.

ರೋಗದ ಬಗ್ಗೆ ಚಿಂತಿಸುವ ಬದಲು ಆರೋಗ್ಯದ ಬಗೆಗೇ ಯೋಚಿಸುತ್ತಿರುವುದ
ಲೇಸಲ್ಲವೆ? ಹಾಗೆಯೇ ವಿಫಲತೆಗೆ ಬದಲು ಸಫಲತೆಯನ್ನೇ ಗಮನದಲ್ಲಿಡಿ. ಅ
ನಿಮಗೆ ಬಂದೊದಗುವ ಅಶಾಂತಿಯಾಗಲೀ ಅಸಾಫಲ್ಯವಾಗಲೀ ನಿಮ್ಮನ್ನು ಸು
ಹಾಗೂ ಸ್ವತ ಜೀವನದತ್ತ ಒಯ್ಯುವ ಸಾಧನವಾಗುವುದೆಂದು ಮನಗಾಣಿರಿ.

(ಹಿಂದಿಯಿಂದ

# ಕೊಡೆಗಳು (ಲಲಿತ ಪ್ರಬಂಧ)

—ಎಸ್. ಎಸ್. ಗದಗಕರ
ಧಾರವಾಡ, ಶುಕ್ರವಾರ ಪೇಟೆ, ನವಲೂರು ಅಗಡಿ

ಕೊಡೆಗಳ ಮಾತು ಬಂದಾಗೆಲ್ಲ, ವರ ಕವಿ ರಾಘವಾಂಕನ ಹರಿಶ್ಚಂದ್ರ ಕಾವ್ಯದಲ್ಲಿಯ ಬೆಳ್ಗೊಡೆಯ ಪ್ರಸ್ತಾಪ ಮರೆಯುವಂತಹದ್ದೇ ಅಲ್ಲ. ಆ ಶ್ವೇತ ಛತ್ರದ ಪ್ರಶ್ನೆ ಉದ್ಭೂತವಾದಾಗ ಸತ್ಯಸಂಧ ರಾಜನ ಮನಃಸ್ಥಿತಿಯಾದರೂ ಎಂತಹದು! ತನ್ನ ರಾಜ್ಯವನ್ನೇ ಹೆರವರಿಗೆ ದಾನ ಮಾಡಿದ ಕನಸೆಂದರೆ ದುಃಸ್ವಪ್ನವೇ! ಹೀಗೆ ಮನಸ್ಸು ವ್ಯಾಕುಲಿತವಾಗಿ, ಗಾಸಿಗಾಸಿಯಾದಾಗ, ರೂಪಶಾಲಿ ಹೊಲತಿಯರು ನೃತ್ಯ ಸಂಗೀತಗಳ ವೈಭವ. ವೈಖರಿ ಪ್ರದರ್ಶಿಸಿದಾಗ ಅರಸನಿಗೆ ಆನಂದದ ಲಾಸ್ಯದಲ್ಲಿ ಲೋಲಾಡಿದಂತೆ ಅನುಭವವಾದರೆ, ಅಚ್ಚರಿ ಅಲ್ಲ. ಅದೇ ಉನ್ಮಾದಾವಸ್ಥೆಯಲ್ಲಿ, 'ಬೇಡಿದ್ದು ಕೊಡುವೆ' ಎಂದು ನುಡಿದು, ತನ್ನ ಮಾತು ನಡಿಸಲೆಂದು ಪ್ರಾರಂಭಕ್ಕೆ ಮುತ್ತಿನ ಸರವನ್ನು (ಮಾಲೆಯನ್ನು) ಅವರೆದುರು ಎಸೆಯುವನು. ಆದರೆ ಹೊಲತಿಯರು ಅಲ್ಪ ಸಂತುಷ್ಟಿಗಳೆ? ಛೆ! ಎಲ್ಲಿಯ ಮಾತು! ವಿಶ್ವಾಮಿತ್ರನ ಮಾಯೆಯಿಂದ ನಿರ್ಮಿತರಾಗಿ, ಹರಿಶ್ಚಂದ್ರನನ್ನು ಪೀಡಿಸಿ ಪೀಡಿಸಿ ಪರೀಕ್ಷಿಸಲು ಪಣತೊಟ್ಟವರು ಅವರು! ಅಂತೇ ಅವರು "ರಾಜಾ, ನೀರಡಿಸಿದವರಿಗೆ ನೀರು ಕೊಡುವದು ಬಿಟ್ಟು ತುಪ್ಪ ಕೊಟ್ಟಂತಾಯಿತು ಉಡಿಗೆ ಸುತ್ತಿ ಸಾವಡಿಸುತಿರಲು ನಿನ್ನ ಮುತ್ತಿನ ಸತ್ತಿಗೆ ತಕ್ಕ ಉಡುಗೊರೆ ಎಂದು ಉದ್ಗರಿಸುವರು. ಅರಸನು ಕ್ಷಣಕಾಲ ದಂಗುಬಡೆದು ಅವಾಕ್ಕಾದರೂ, ಇದು ತಾಯಿ, ಸಖಿ, ಚತುರಂಗಬಲ ಪ್ರತೀಕ, ತಂದೆ, ದೈವ'–ಎಂತೆಂತೊ ಅವರ ಮಹಿಮೆ ಬಣ್ಣಿಸುವನು. ಆದರೂ ಲೋಭಿತನವ ಆರೋಪವೇನೂ ಅವನಿಗೆ ತಪ್ಪುವದಿಲ್ಲ. ಇದೇ ಬಗೆಯಾಗಿ ಕವಿಕುಲ ಗುರು ಕಾಳಿದಾಸನ ರಘುವಂಶದಲ್ಲಿ, ಮಾಯಾ ಸಿಂಹವು ದಿಲೀಪನಿಗೆ ಸತ್ತಿಗೆಯ ಹಿರಿಮೆಯನ್ನು ಅವನ ತಾರುಣ್ಯವನ್ನು, ಅವಪೌಲ್ಯ ರಾಜವಿಲಾಸವನ್ನು ಅವನ ತಾರತಮ್ಯ ಹೀನತೆಯನ್ನೂ

"ಏಕಾತಪತ್ರಂ ಜಗತಃ ಪ್ರಭುತ್ವಂ
ನವಂ ವಯಃ ಕಾಂತಮಿದಂ ವಪುಶ್ಚ॥
ಅಲ್ಪಸ್ಯ ಹೇತೋರ್ಬಹುಹಾತುಮಿಚ್ಛನ್
ವಿಚಾರ ಮೂಢಃ ಪ್ರತಿಭಾಸಿ ಮೇತ್ವಂ॥

ಎಂಬ ವಾಣಿಯಲ್ಲಿ ತಿಳಿಹೇಳುವಾಗ ಛತ್ರದ ಸ್ಥೂಲ ವಿಷಯವನ್ನು ಸಾಮಾನ್ಯರಾದರೂ ಅಲಕ್ಷಿಸುವುದೆಂತು?

ಪ್ರಾಚೀನ, ಅರ್ವಾಚೀನ ಕಾವ್ಯಗಳ ಊಹಾಪೋಹ ಬಿಟ್ಟು ಕೇವಲ ವಾಸ್ತವ ರಂಗಕ್ಕಿಳಿದರೆ, ನಿತ್ಯ ವ್ಯವಹಾರದಲ್ಲಿ ಕೊಡೆಯ ಬಗ್ಗೆ ಹಲವಾರು ಲೋಕೋಕ್ತಿಗಳ ಪ್ರಚಲಿತವಾದುವನ್ನು ಕಾಣುವೆವು. 'ಹೊತ್ತು ಬಂದಂತೆ ಕೊಡೆ ಹಿಡಿ' ಎಂಬುದ ತೀರ ಸಾಮಾನ್ಯ ನುಡಿ. ವ್ಯವಹಾರದ ಜೀವಾಳವದು, ಭಾವಗರ್ಭಿತತೆಯು ಆಗ ವದು, 'ಸಿಡಿಲು ಹೊಡೆದರೆ ಹಿಡಿದ ಕೊಡೆ ಕಾವುದೆ?' ಎಂಬ ನುಡಿಯಲ್ಲಿ ಕಾಲ ಪುರುಷನ ಮಹಿಮೆ ಮೆರೆಯುತ್ತಿದೆ! 'ಮಳೆಗಾಲದ ಬಿಸಿಲನ್ನು ಮನೆಯ ಗಂಡನ ನಗೆಯನ್ನು ನಂಬಕೂಡದು' ಎಂಬ ಜಾಣ್ಣುಡಿಯಲ್ಲಿ ನೇರವಾಗಿ ಆಗದಿದ್ದರೂ ಕೊಡೆಯ ವಿಷಯ ಹಣಿಕಿಕ್ಕುವದು ಹಲವಾರು ಸಲ ನಾವು ಮಳೆಗಾಲದಲ್ಲಿಯ ಕೊಂಚ ಸೂರ್ಯ ಛಾಯೆಗೆ ಮೋಸಹೋಗಿ ಮುಂದೂ ಧೊ ಧೊ ಮಳೆಯ ಹೊಡೆ ತಕ್ಕೆ ಸಿಕ್ಕು ಪೇಚಾಡಿಲ್ಲವೆ? ನಿವೃತ್ತ ಅಧಿಕಾರಿಗಳಂತೆ ಇದನ್ನೇನು ಒಯ್ಯುವದು ಎಂದು ಹೆಂಡತಿಯ ಮಾತು ಕೇಳಿ ಕೊಡೆ ಬಿಟ್ಟು ಹೋದುದಕ್ಕೆ ಎಂತಹ ಪ್ರಾಯ ಶ್ಚಿತ್ತ! ನೆನಸಿಯೆ ಹೆಚ್ಚರಿಕೆ ತಳೆಯಬಹುದಾದ ವಿಷನಿಮಿಷವದು!

ಮಳೆಗಾಲದ ಆವಿರ್ಭಾವದ ಸುಳಿ ಹತ್ತಿದಾಗ ಶ್ರೀರಂಗರ 'ಋತು ಸಂಹಾರ' ಎಂಬ ತಲೆಹರಟೆ ತಾನಾಗಿಯೇ ಮಿಂಚಿಹೋಗುವದು. ಅಲ್ಲಿ ಪೋಸ್ಟ್‌ಮನ್‌ನಿಗೆ ಆಫೀಸು ಕೊಡೆಯನ್ನೇನೊ ಕೊಟ್ಟಿರುವದು. ಆದರೆ ಅವನ ರಕ್ಷಣೆಗಲ್ಲ! ಪತ್ರಗಳ ಗಾಗಿಯಂತೆ! ಎಂತಹ ವಿಡಂಬನೆ! ಪಾಪ! ಸರಳ ಹೃದಯಿ ಪೋಸ್ಟ್‌ಮನ್‌ನು ತಾನು ಉಳಿದರೆ ಮುಂದೆ ಪತ್ರಗಳು ಎಂದು ತಿಳಿದು, ಆತ್ಮರಕ್ಷಣೆ ಮಾಡಿಕೊಂಡದ್ದಕ್ಕೆ ಪತ್ರದ (ಒಂದೇ!) ವಿಳಾಸವೆಲ್ಲ ಮಳೆಯ ಹನಿಗಳ ಮೂಲಕ ಮಟ್ಟಮಾಯವಾಗಿ 'ಕೊಡೆ ಎಂಬನಾತ ಪತ್ರವನು' ಎಂದು ಉದ್ಗಾರ ಹೊರಡಿಸಿದುದು ಔಚಿತ್ಯದ ಸೀಮೆಯಲ್ಲಿಯೇ ಸರಿ! ಇನ್ನು ಎಷ್ಟು ಇಂಚು ಮಳೆ ಆಯಿತೆಂಬುದಕ್ಕೆ "Rain guage" ಯಂತ್ರ ಬೇಡವೇ ಬೇಡಂತೆ! ತಾವು ಹಾಕಿದ ಚಪ್ಪಲಿ, ಬೂಟು ಗಳಿಂದುಂಟಾದ ಕೆಂಪು ಕಲೆಗಳ ಶುದ್ಧ ಅಳತೆ ಮಾಡಿಬಿಟ್ಟರೆ ತೀರಿತಂತೆ (ಎಲ್ಲಿಯ ವರೆಗೆ ಆ ಕಲೆಗಳು ಹೋಗಿವೆ ಅಷ್ಟು) ಕೊಡೆಯ ಪ್ರಶ್ನೆ ಇಲ್ಲಿ ಏಳದಿರುವದು ಸೋಜಿಗ ವಲ್ಲವೆ? (ಅದು ತಲೆಯ ಮೇಲೆ ಇರುವದೇ ಕಾರಣ!)

ಮನ್ಸೂನ್ ಮಳೆಯ ಮುನ್ಸೂಚನೆ ಆಕಾಶದಲ್ಲಿಯ ಕಾರ್ಮೋಡಗಳ ಕರಾಳ ಛಾಯೆಯಿಂದ ಎಂದು ವೈಜ್ಞಾನಿಕರು ಹೇಳಿದರೂ ಕೊಡೆಗಳ ಅವಿರತ "ಖರೀದಿ" ಯಿಂದ ಎಂದು ನಾಗರಿಕರಾದ ನಾವು ಇಂದು ಎದೆ ತಟ್ಟಿ ಹೇಳಬಹುದು. ಉಳಿದ ಋತುಮಾನಗಳಲ್ಲಿ ಅವುಗಳು ಕಾಂತಿಹೀನನಾಗಿರುವವಲ್ಲವೇ? ರದ್ದೀ ಬಕೀಟುಗಳು ಅವು ಎಂದು ಶರಾ ಹಾಕಬಹುದಲ್ಲವೇ? ಶೇಕ್ಸಪಿಯರ ಮಹಾಕವಿಯ ಉಪಮೆ ಕಡ ತಂದು ಹೇಳಬೇಕೆಂದರೆ, "Twice told tale" ಎನ್ನಬಹುದು. ಏನೇ ಆಗಲಿ,

ಅಂಗಡಿಗಳಲ್ಲಿ “Beware of imitations” ಅಥವಾ ‘ನಕಲಿ ಮಾಲಿಗೆ ಮೋಸ ಹೋಗಬೇಡಿರಿ’ ಎಂದು ಬೋರ್ಡ್‌ಗಳು ತೂಗುಬಿದ್ದುದು ಕಾಣುವುದು ಸಹಜ. ಕೇವಲ ಹೊರಗಿನ ಝಗ-ಝಗನೆ ಹಿಪ್ರೋಡಿನ ಸಪ್ತವರ್ಣದ ಹಿಡಿಕೆಯನ್ನು ನೋಡಿ ಕೊಂಡದ್ದಕ್ಕೆ ಹಳಹಳಿಸುವುದು ಇದ್ದೇ ಇದೆ. ಏಕೆಂದರೆ ಝಣ-ಝಣ ಎಂದು ರೂಪಾಯಿ ಎಣಿಸಿದ್ದರೂ ಅದೇ ಖಾತ್ರಿ, ಅರಿವೆ ನಾಲ್ಕು ದಿನದ ದೊಡ್ಡ ದೊಡ್ಡ ಸೆಳಕುಗಳಲ್ಲಿ ತನ್ನ ರಕ ತೋರಿಸಿ. ಮಾಯಾವಾದಿ ಶ್ರೀ ಶಂಕರ ಭಗವತ್ಪಾದರ ಸಿದ್ಧಾಂತದಂತೆ, ತನ್ನ ವೈ- ಬಣ್ಣಕ್ಕೂ ಮಾಲಿಕನ ಶರ್ಟ್ ಬುಶ್ ಪ್ಯಾಂಟುಗಳ ಬಣ್ಣಕ್ಕೂ ಭೇದವೇ ಉಳಿಯದಂತೆ ವಾತ್ಸಲ್ಯಪ್ರಕಟಿಸುವುದು! ಎಂತಹ ದೈವೀ ತಾದಾತ್ಮ್ಯ, ತನ್ಮಯತೆ, ಅಲೌಕಿಕ ಪ್ರೇಮ!

ಇರಲಿ, ಇಂತಹ ಕೊಡೆ ಹಿಡಿದುಕೊಂಡಾದರೂ ಯಾರು ಯಾರು ಹೇಗೆ ಯಾವ ಯಾವ ಋತುಮಾನಗಳಲ್ಲಿ ಉಪಯೋಗಿಸಿಕೊಳ್ಳುವರೆಂಬುದು ನಿಜವಾಗಿಯೂ ಮೋಹಕವಾದ ವಿಷಯ! ತಮಗೆ ಬೇಡವಾದ ನಿರುದ್ಯೋಗಿ ವ್ಯಕ್ತಿಯನ್ನಾಗಲೀ, ಶತ್ರು ಸಾಹಿತಿಯನ್ನಾಗಲೀ, ಸಾಲಗಾರರನ್ನಾಗಲೀ ತಪ್ಪಿಸಲು ಇದೊಂದು ಪರಮ ಶ್ರೇಷ್ಠ ಸಾಧನ! ವಯಸ್ಕರಿಗೆ ಕೊಡೆ ವಾಕಿಂಗ್ ಸ್ಟಿಕ್ಕಾಗಿ ಪರಿಣಮಿಸಿದರೆ, ಇತರರಿಗೆ ದನ ಕರುಗಳನ್ನು ಬೆದರಿಸಲು ಉಪಯೋಗ ಎಲ್ಲ ಕಾಲದಲ್ಲಿಯೂ ಕೊಡೆಯಿಂದ ಆಗಲಲಿಲ್ಲ ವೇದು ಇಂಗ್ಲಂಡದ ಪ್ರಧಾನ ಸಚಿವ ಚೇಂಬರ್ಲೇನರಿಗೆ–ಛತ್ರಿ ಚೇಂಬರ್ಲೇನರೆಂದು ವಿವೇಕಿಗಳು(ಉಡಾಳರೋ?) ಅಡ್ಡ ಹೆಸರು ಕೊಡಲಿಲ್ಲವೆ?

“ಆಕಾಶವೇ ದೊಡ್ಡ ಕೊಡೆ” ಎಂದು ಹೇಳುವ ತಾತ್ವಿಕರಿಗೆ ಕೊಡೆಯ ನಿಜವಾದ ರಂಜಕ–ರೂಪ ಗೊತ್ತಿರಲಿಕ್ಕಿಲ್ಲ. ಕನ್ನಡದ ಲೋಕಪ್ರಿಯ ಕವಿ ಪಂಜೆಯವರ ಪದ್ಯ ಓದಿದವರಿಗೆ ‘ಕೊಡೆಯೊಡೆಯರ’ ಹೃದಯ ವಿದ್ರಾವಕ ಸ್ಥಿತಿ ಬಣ್ಣಿಸಿ ಹೇಳುವ ಅಗತ್ಯವಿಲ್ಲ. ಅವರ ಕೊಂಕಣ ಸೀಮೆಯ ‘ತೆಂಕಣಗಾಳಿಯು’, ಮಹಾ ನಿರ್ದಯಿ. ‘ಬಡಮುದುಕರ ಕೊಡೆಗರಿ ಹರಿದಾಡಿಸಿ ಬಿಡುವುದು! ತೆಂಗನು ಲಾಗಿಸುವುದು. ಹುಡುಗನ ತಲೆ ತಲೆ ಟೊಪ್ಪಿಗಳು ಆಟವ ದಡ ಬಡಿಸುವುದು. ಅಡಿಕೆಯ ಬಾಗಿಸುವುದು; ತೆನೆ ಇಬ್ಭಾಗಿಸುವುದು, ಎಲ್ಲ ತೀರ ಸಾಮಾನ್ಯ ಲೀಲೆಗಳೆ!

ಕೊಡೆಯ ವಿಶ್ವರೂಪವೆಂತಿದ್ದರೂ ಅದರ ಆಕಾರದಲ್ಲಿ ಉಳಿದ ವೇಷ ಭೂಷಗಳಲ್ಲಿಯಂತೆ—ಇಂದಿನ ಮನ್ವಂತರದಲ್ಲಿ ಹೆಚ್ಚು ಕಡಿಮೆ, ಅಸಂಬದ್ಧತೆ, ಕುರೂಪ ತಲೆದೋರದಿದ್ದುದು ನಿಜವಾಗಿಯೂ ಸಾಮಾಜಿಕ ದೃಷ್ಟಿಯಿಂದ ಕ್ಷೇಮಕರವೇ ಆಗಿದೆ. ಅಷ್ಟೆ ಏಕೆ? ಮಳೆಗಾಲದಲ್ಲಿ ಕೊಡೆ ಇಲ್ಲದೆ ನಡೆಯುವಂತಿಲ್ಲ. ಶಿಷ್ಟಾಚಾರಕ್ಕನುಗುಣವಾಗಿ ಒಬ್ಬರು ತಮ್ಮ ಒಂದೇ ಕೊಡೆಯನ್ನು ಹಲವಾರು ಜನರಿಗೆ ಹಿಡಿದಾಗ ಯಾರಿಗೂ ತೋಯಿಸಿಕೊಳ್ಳುವುದು ತಪ್ಪುವುದಿಲ್ಲ. ಮಾಲಿಕನು ಲೋಕಕಲ್ಯಾಣಿಸೀಗ ಹೋಗಿ ಇತರರಂತೆ ನೆನೆದುಹೋಗುವನು—ತುಂತುರು ಮಳೆಯಲ್ಲಿ! ಆದರೂ

ವ್ಯವಹಾರದಲ್ಲಿ—ಸುಶಿಕ್ಷಿತ ಸಮಾಜದಲ್ಲಿ—ಒಬ್ಬನಿಗೆ ಒಂದು ಕೊಡೆ ಎಂಬ ಲೆಕ್ಕವಿದೆ. ಮಳೆ ಬಂದಾಗ ಸಭೆ ನಡೆದಿದ್ದರೆ ಸ್ಥೂಲಮಾನದಿಂದ ಅಲ್ಲಿಯುರ ಜನಸಂಖ್ಯೆ ಗೊತ್ತು ಮಾಡಿಕೊಳ್ಳಲು ಕೊಡೆಗಳನ್ನು ಎಣಿಸಬಹುದಲ್ಲವೆ? ಕುರಿಗಳ ಸಂಖ್ಯೆ ಗೊತ್ತು ಮಾಡಿಕೊಳ್ಳಲು ಹಳ್ಳಿಯವನು ಕಾಲುಗಳನ್ನೆಣಿಸಿ ಅದಕ್ಕೆ ನಾಲ್ಕರಿಂದ ಭಾಗಿಸು ದುದನ್ನು ನೀವು ಕೇಳಿಲ್ಲವೆ?

ಕೊಡೆ ಇಂತು ಅನಿವಾರ್ಯವಾದಾಗ, ಅವುಗಳ ಬಗೆಗ ಕಾಣಬೇಕಾದರೆ ದೊಡ್ಡ ನಗರದ ಭರ ಬೀದಿಗೆ ಹೋಗಿ ಹತ್ತು ಹದಿನೈದು ನಿಮಿಷ ನಿಂತರೆ ಸಾಕು—ನಿರೀಕ್ಷಕನ ಸೂಕ್ಷ್ಮ ರೀತಿಯಲ್ಲಿ! ಸುಶಿಕ್ಷಿತ ಸ್ತ್ರೀಯರ ಕೊಡೆಗಳಿಗಂತೂ ಹಣಕೊಟ್ಟು ಕೊಂಡ ದಕ್ಕೆ—ಕೊಡೆ ಎನ್ನಬೇಕು. ಬೇಕಾದಷ್ಟು ಬಂಗು ರಂಗು ಇರಬಹುದು ಅವು! ನಾಜೂಕು ಇದ್ದಿದ್ದಾವು. ಆದರೆ ಎಲ್ಲ ಗಾತ್ರದವರಿಗೂ ಅದೇ ಆಕಾರ (ಚಿಕ್ಕ!). ಏನು ವಿಚಿತ್ರ! ಉಪಯುಕ್ತತೆಯ ಮಾನದಿಂದ ಇವನ್ನು ಅಳೆಯದೆ ಆಭರಣ ಇವು ಎಂದರೆ ಮಾತ್ರ ಸರಿ! ಸಮಸ್ಯಾ ಪೂರ್ತಿ ಆದೀತು!

ಮಹಿಳೆಯರ ಮಾತು ಇಂತಿದ್ದರೂ ಸದ್ಗೃಹಸ್ಥರು ಹೊಚ್ಚ ಹೊಸ ಕೊಡೆಯನ್ನು ಬಹಳ ಜತನವಾಗಿರಿಸುವರು. ಹೆಚ್ಚು ಹಣ ತೆತ್ತಾಗಂತೂ ಅದನ್ನು ಹೊರಗೇ ತೆಗೆ ಯುವುದಿಲ್ಲ. ಹಲವು ದಿನ ಅದನ್ನು ಮಳೆಯಲ್ಲಿ ಸಹ ಬಿರಿಸದಂತೆ ಹೊರಡುವರೆಂದ ಮೇಲೆ ಆ ಮೋಹಕತೆಗೆ ಬೇರೆ ನಿದರ್ಶನಗಳೇ ಬೇಡ ಎನಿಸುವುದು. ದುರ್ದೈವದಿಂದ ಇವು—ದೇವಸ್ಥಾನ, ಸಭೆ-ಸಮ್ಮೇಳನ, ಉಪಹಾರಗೃಹ, ಥಿಯೇಟರುಗಳಲ್ಲಿ ಕಳವಾಗಿ ಹೋದರೆ ಎಂತಹ ಅನಿರ್ವಚನೀಯ ವ್ಯಥೆ! ವಿರಹ ವ್ಯಥೆಯನ್ನು ಮೀರಿಸುವುದೇನೊ ಅದು! ವಾಚ್ ಫೌಂಟನ್‌ಪೆನ್, ಸಾಯಕಲ್, ಕನ್ನಡಕಗಳಂತೆ ಕೊಡೆಯೂ ಒಂದು ಇಂತಹ ಲೋಭಿಗಳಿಗೆ "untransferrable property" ಎನಿಸಿದರೆ ಅಸಹಜ ವೇನೂ ಅಲ್ಲ!

Seeptre end crown must tremble down and with dust be equal made" ಎಂಬ ಆಂಗ್ಲ ಕವಿ ಶೆಲ್ಲಿಯ ಉದ್ಗಾರವು ಮಾನವ ತೆಯ ಹಿರಿ ಲಕ್ಷಣ ವಿವರಿಸಿ ತಾರತಮ್ಯಕ್ಕೆ ಬೆಲೆ ಇಲ್ಲವೆಂದು ಹೇಳುತ್ತಿದ್ದಾರೆ. ಕೊಡೆ ಯಾದರೂ ಇಂದು ಎಲ್ಲರ ಸಾಮಾನ್ಯ ಸೊತ್ತಾಗಿದೆ. ಮೇಲು ಕೀಳು ಎಂಬ ದರ್ಜೆ ಯನ್ನನುಲಕ್ಷಿಸದೆ ಎಲ್ಲರ ಕೈವಾರಿ ಆಗಿರುವ ಕೊಡೆ ಕೊನೆಗೆ ಸಮತಾವಾದದ ಪ್ರತೀಕ ವೆಂದು ಹೊಳೆಯುವುದಲ್ಲವೆ? ಇದೀಗ ಕೊಡೆಯ ಬಹುರೂಪ ವಿರಾಟರೂಪ?

# ಗ್ರಾಮಾಂತರ ಬಸವ ಜಯಂತಿ

— ಹೆಚ್. ವಿ. ವೀರಭದ್ರಯ್ಯ

ಕರ್ನಾಟಕದ ಕಾಶ್ಮೀರವೆಂದೇ ಪ್ರಸಿದ್ಧಿ ಕೊಡಗು ಜಿಲ್ಲೆಗೆ. ನಿಸರ್ಗದ ತುಂಬು ಸೌಂದರ್ಯ, ಗಿರಿ ಕಂದರಗಳ, ತರು ಮರಗಳ, ಖಗ ಮೃಗಗಳ, ತೌರು ಭೂಮಿ, ಕನ್ನಡನಾಡಿನ ಮಲೆನಾಡು, ಅದರೊಂದಿಗೆ ಬಾಂಧವ್ಯ ಕೊಡಗಿಗೆ. ಒಂದು ಕಾಲಕ್ಕೆ ವೀರಶೈವ ದೊರೆಗಳ ಆಳ್ವಿಕೆಗೆ ಒಳಪಟ್ಟಿತ್ತು ಕೊಡಗು. ಅಲ್ಲಿ ಮಠ-ಮಾನ್ಯಗಳು ವೀರಶೈವ ಧರ್ಮಪ್ರಚಾರಕ್ಕೆ ಸಾಕಷ್ಟು ಕೆಲಸ ಮಾಡಿದವು. ಕಾಫಿ ಏಲಕ್ಕಿಗಳ ಘಮ ಘಮ ವಾಸನೆಯ ಮಧ್ಯೆ ಬಸವ ಜಯಂತಿಯ ಗಂಧದ ನರುಗಂಪು ಹಬ್ಬಿ ಹರಡಿತು ಕೊಡಗಿನ ಪ್ರಮುಖ ಪುಣ್ಯಗ್ರಾಮ ಶುಕ್ರವಾರಸಂತೆಯಲ್ಲಿ ತಾ|| 25-2-85 ರಂದು. ಊರಿಗೆ ಊರೇ ಹಬ್ಬವನ್ನಾಚರಿಸಿತು ಅಂದು. ಪ್ರಕೃತಿಯ ಹಚ್ಚ ಹಸುರಿನ ಮಧ್ಯೆ ಸಮಾರಂಭ ಅದ್ದೂರಿಯಾಗಿ ನಡೆಯಿತು.

ಸಮಾರಂಭ ಸಕಾಲಕ್ಕೆ ಪ್ರಾರಂಭವಾಯಿತು ಬಣ್ಣ ಬಣ್ಣದ ತೋರಣಗಳ ಮಧ್ಯೆ, ಮಲೆನಾಡಿನ ಹೆಣ್ಣು ಮಕ್ಕಳ ತುಂಬು ಕಂಠದಿಂದ ವಚನಗಾಯನದೊಂದಿಗೆ ಪ್ರಾರ್ಥನೆಯಾಯಿತು. ಸ್ವಯಂಸೇವಕರ ಪ್ರಾಮಾಣಿಕ ಸೇವೆಯ ಫಲವಾಗಿ ಶಿಸ್ತು ವ್ಯಕ್ತವಾಗುತ್ತಿತ್ತು. ನೂತನವಾಗಿ ಪ್ರತಿಷ್ಠಾಪಿತಗೊಂಡ ಶ್ರೀ ವಿನಾಯಕ ದೇವ ಮೂರ್ತಿಯ ಮುಂದೆ ಬಸವ ತತ್ವಗಳ ಶುಭ ಕಹಳೆ ಕೊಂಬುಗಳು ಮೊಳಗಿದವು.

"ಜಗದ ಜಲಗಾರನಾದ ಬಸವಣ್ಣನ ತತ್ತ್ವಗಳನ್ನು ಅನುಸರಿಸದಿದ್ದರೆ ಧರ್ಮ ಪಂಥಕ್ಕೆ ಭವಿಷ್ಯವಿಲ್ಲ. ಆ ಮಹಾನುಭಾವನ ತತ್ತ್ವಗಳನ್ನು ಪರಿಪಾಲಿಸಿದ್ದರೆ ಭರತ ವರ್ಷಕ್ಕೆ ಇಸ್ಲಾಂ ಧರ್ಮವಾಗಲಿ, ಕ್ರೈಸ್ತ ಧರ್ಮವಾಗಲಿ ಬರುತ್ತಿರಲಿಲ್ಲ ಎಂಬ ಕುವೆಂಪುರವರ ಹೇಳಿಕೆಯ ಪ್ರಸ್ತಾಪ ಧಾರ್ಮಿಕ ತಳಹದಿಯ ಮೇಲೆ ಬಸವಣ್ಣ ಬದುಕಿನ ಮಹಾಸೌಧ ಕಟ್ಟಿದರು, ಜಗತ್ತಿಗೆ ಆ ಪುಣ್ಯಮೂರ್ತಿ ನೀಡಿದ ಮಹಾ ಸಂದೇಶ ಸಾರ್ವಕಾಲಿಕವಾದ, ಸಾರ್ವತ್ರಿಕವಾದ ಕಾಯಕ ತತ್ತ್ವವೆಂಬುದನ್ನು ಈ ವೈಜ್ಞಾನಿಕ ಯುಗ ಅರ್ಥಮಾಡಿಕೊಳ್ಳಬೇಕು. ಉದ್ಯೋಗಾವಲಂಬಿಯಾಗದ ವ್ಯಕ್ತಿ ಲೋಕಕ್ಕೆ ಹೊರೆ. ಜೀವನದಲ್ಲಿದ್ದ ಹಲವು ಹನ್ನೊಂದು ರೂಪದ ಕೊಳಕನ್ನು ಉಜ್ಜಿ ತೆಗೆದರು. ಕೊಳಕು ಜೀವನ ಇಲ್ಲದಂತೆ ಮಾಡಿದರು ಬಸವಣ್ಣ. ದೂರನೋಟದ ಸಮದರ್ಶಿಯಾದ ಬಸವಣ್ಣನವರು ಹೆಣ್ಣು ಮಕ್ಕಳ ಜೀವನ ಸುಧಾರಣೆಯಲ್ಲಿ ಮಹತ್ವದ ಪಾತ್ರ ವಹಿಸಿದರು. ಆ ಫಲವಾಗಿ ಅನೇಕ ತಾಯಂದಿರು ವಚನಗಾರ್ತಿಯರಾದರು. ವಚನಕಾರ್ತಿಯರು ಸಮಾಜದ ಅತ್ಯಂತ ಕೆಳವರ್ಗದಿಂದ ಬಂದರು ಎಂಬುದನ್ನು [illegible]

ಭಾವಿಸಿದಾಗ ಅಣ್ಣನವರ ಸೇವಾ ಪರಿಕಲ್ಪನದ ಗರಿಮೆ ಅರಿವಾಗುತ್ತದೆ. ಒಂದು ಕುಟುಂಬಕ್ಕೆ, ಒಂದು ಗ್ರಾಮಕ್ಕೆ, ಒಂದು ಸಮಾಜಕ್ಕೆ, ಒಂದು ನಾಡಿಗೆ, ಒಂದು ರಾಷ್ಟ್ರಕ್ಕೆ ಬೆಲೆ ಬರುವುದು, ಗೌರವ ಪ್ರಾಪ್ತವಾಗುವುದು ಹೆಣ್ಣುಮಕ್ಕಳ ಜೀವನ ವಿಧಾನದಿಂದ, ಅವರ ಸಂಸ್ಕೃತಿಯಿಂದ. ವಚನಕಾರ್ತಿಯರ ಜೀವನ ವಿಧಾನವಂತೂ ಪ್ರಾತಃ ಸ್ಮರಣೀಯವಾದುದಾಗಿದೆ. ಆತ್ಮ ವಿಕಾಸದೊಂದಿಗೇ, ಸ್ವಾವಲಂಬಿಗಳಾಗಿ ಕೈಹಿಡಿದ ಪುರುಷರಿಗೂ ದಾರಿದೀಪವಾಗಿ ಬಾಳಿದ ಅವರ ಬದುಕು ಶರಣ ಧರ್ಮ ಗೋಪುರದ ಬಂಗಾರದ ಕಲಶ. ಬಸವಣ್ಣನವರು ಇಷ್ಟಲಿಂಗದ ಉಪಾಸನೆಯನ್ನು ಕೇವಲ ವ್ಯಕ್ತಿಯ ಅನುಸಂಧಾನದ ಮಾಧ್ಯಮವನ್ನಾಗಿಯಷ್ಟೇ ಬಳಸದೆ ಅದನ್ನು ಸಾಮಾಜಿಕ ಸಮಾನತೆಯ ಸಾರ್ವತ್ರಿಕ ಉನ್ನತಿಯ ಕುರುಹನ್ನಾಗಿಯೂ ಬಳಸಿದರು. ತಮ್ಮ ವೈಚಾರಿಕ ಕ್ರಾಂತಿಯ ದಿವ್ಯ ಸಾಧನವನ್ನಾಗಿಸಿದರು. ಇಂದು ನಾವು ನಮ್ಮ ಜೀವನ ಸಮಸ್ಯೆಗಳ ಪರಿಹಾರಕ್ಕೆ ಬಸವಣ್ಣನವರ ತತ್ತ್ವಗಳನ್ನೇ ಅನುಸರಿಸಬೇಕಾಗಿದೆ. ರಾಷ್ಟ್ರದ ಬಹುಮುಖಸಮಸ್ಯೆಗಳ ಪರಿಹಾರಕ್ಕೆ ಅವರು ನೀಡಿದ ಕಾಯಕ ಮತ್ತು ದಾಸೋಹ ತತ್ತ್ವಗಳೇ ಸಮರ್ಥ ಪರಿಹಾರ " ಎಂಬುದಾಗಿ ಪರಮ ಪೂಜ್ಯ ಶ್ರೀ ಶ್ರೀ ಗಳವರು ಆಶೀರ್ವಚನ ನೀಡಿದರು.

ಬಸವಣ್ಣನವರು ಮಾಡಿದ ಮಹಾ ಸುಧಾರಣೆಯ ಬಿತ್ತಗಳು ಗ್ರಾಮೀಣ ಗರತಿಯರ ಮುಗ್ಧ ಹೃದಯದಲ್ಲಿ ಮೊಳೆತು, ಕುಡಿಯೊಡೆದು ದಳದಳವಾಗಿ ಅರಳಿದವು, ಜನಪದ ಗೀತೆಗಳ ರೂಪದಲ್ಲಿ ಎನ್ನುತ್ತಾ ಬಸವಣ್ಣನ ಅಭಿಮಾನ, ಕಾಯಕನಿಷ್ಠೆ, ಸದಾಚಾರ ಸಂಪನ್ನತೆಯನ್ನು ಹೆಣ್ಣುಮಕ್ಕಳ ಹಾಡುಗಳಲ್ಲಿ ಹರಿದು ಬಂದಿರುವ ಪರಿಯನ್ನು ನಿರೂಪಿಸಿದರು ಶ್ರೀ ಹೆಚ್. ವಿ. ವೀರಭದ್ರಯ್ಯನವರು.

ರಾತ್ರಿ 10–30ಕ್ಕೆ ಜಗಜ್ಯೋತಿ ಬಸವೇಶ್ವರ ನಾಟಕ ಶ್ರೀ ಕ್ಷೇತ್ರದ ಶ್ರೀ ಸಿದ್ಧಲಿಂಗೇಶ್ವರ ನಾಟಕ ಮಂಡಲಿಯವರಿಂದ ಪ್ರದರ್ಶಿತವಾಯಿತು. ಸುಮಾರು ಇಪ್ಪತ್ತು ಸಾವಿರ ಪ್ರೇಕ್ಷಕರು ನೋಡಿ ತಣಿದರು. ಮಲೆನಾಡ ಬಂಧುಗಳಿಗೆ ಅದೊಂದು ವಿಸ್ಮಯ ಲೋಕವಾಗಿತ್ತು. ಮಂಜು ಬೀಳುತ್ತಿತ್ತು. ನಾಟಕ ನಡೆದೇ ಇತ್ತು. ಮಂಜಿಗೆ ಹೆದರದೆ ಪ್ರೇಕ್ಷಕರು ನಾಟಕದ ಉದ್ದಕ್ಕೂ ಚಪ್ಪಾಳೆಗಳ ಮೂಲಕ ನಾಟಕವನ್ನು ಮೆಚ್ಚಿ ಪ್ರೋತ್ಸಾಹಿಸುತ್ತ ಬಂದರು. ಬೆಳ್ಳಿ ಮೂಡಿದಾಗ ನಾಟಕದ ಮಂಗಳವಾಗುತ್ತಿತ್ತು. ಸ್ವಾಮಿಗಳ ಅದ್ಭುತ ಸೇವೆಯನ್ನು ಮೆಚ್ಚಿ ಹಿರಿಯರೊಬ್ಬರು, ಬಸವಣ್ಣನವರನ್ನು ನಾವು ನೋಡಿರಲಿಲ್ಲ; ಇಂದು ನೋಡಿದೆವು ಸ್ವಾಮಿಗಳ ರೂಪದಲ್ಲಿ. ನಮ್ಮ ಭಾಗ್ಯ ಅವರ ಜೀವಿತ ಕಾಲದಲ್ಲಿ ನಾವೂ ಅವರೊಂದಿಗೆ ಬಾಳಿದ್ದೇವೆ. ಎಂದು ಭಕ್ತಿನುಡಿಗಳನ್ನಾಡಿದರು.

# ಹಳೆಯ ವಿದ್ಯಾರ್ಥಿಗಳ ಸಂಘಕ್ಕೆ 'ಶಾಶ್ವತ' ಸದಸ್ಯತ್ವ ಪಡೆದಿರುವವರು

ಸರ್ವಶ್ರೀ :—

87 ಕೆ. ಎಸ್. ಸರ್ವಭೂಷಣ ಸ್ವಾಮಿ, ಕೆನರಾ ಬ್ಯಾಂಕ್, ಬಂಗಾರಪೇಟೆ ಬ್ರಾಂಚ್, ಕೋಲಾರ ಜಿಲ್ಲೆ.

88 ಹೆಚ್. ಎಸ್. ಬಸವರಾಜು, ಮುಖ್ಯೋಪಾಧ್ಯಾಯರು, ಹರಳೂರು, ತುಮಕೂರು ಜಿಲ್ಲೆ.

89 ಎಸ್. ವಿರುಪಾಕ್ಷಯ್ಯ, ಸಂಸ್ಕೃತ ಪಂಡಿತರು, ಬಸವೇಶ್ವರ ಪ್ರೌಢಶಾಲೆ, ಸಿದ್ಧಗಂಗಾ ಮಠ, ತುಮಕೂರು ಜಿಲ್ಲೆ.

90 ವೈ. ಎನ್. ಬಸವರಾಜು, ಸೆಕ್ಷನ್ ಆಫೀಸರ್, ಕರ್ನಾಟಕ ವಿದ್ಯುಚ್ಛಕ್ತಿ ಮಂಡಳಿ, ಬಡವನಹಳ್ಳಿ, ಮಧುಗಿರಿ ತಾಲ್ಲೂಕು.

91 ಕೆ. ಎಂ. ವೀರಭದ್ರಯ್ಯ, ಸಿ.ಹೆಚ್. 39, ಐದನೇ ಮುಖ್ಯ ರಸ್ತೆ, ಸರಸ್ವತಿ ಪುರಂ, ಮೈಸೂರು–9.

92 ಬಿ. ಜೆ. ರಮೇಶ, ನಂ. 192, 17ನೇ ಅಡ್ಡರಸ್ತೆ, ಎಂ. ಆರ್. ಸಿ. ಆರ್. ಬಡಾವಣೆ, ವಿಜಯನಗರ, ಬೆಂಗಳೂರು–560040.

93 ಹೆಚ್. ಡಿ. ರೇಣುಕುಮಾರ್, ನಂ. 885, 4ನೇ ಮುಖ್ಯ ರಸ್ತೆ, 3ನೇ ಅಡ್ಡ ರಸ್ತೆ, ವಿಜಯನಗರ, ಬೆಂಗಳೂರು–560040.

94 ಬಿ. ಹೆಚ್. ಸೋಮಶೇಖರಯ್ಯ, ಮುಖ್ಯೋಪಾಧ್ಯಾಯರು, ಜ್ಞಾಲಪ್ಪ ಕಾಂಪೌಂಡ್, ಹೊಸೂರು ಮುಖ್ಯ ರಸ್ತೆ, ಮಡಿವಾಳ, ಬೆಂಗಳೂರು–68.

95 ಎನ್. ಆರ್. ಮಲ್ಲಿಕಾರ್ಜುನಯ್ಯ, ನಂ. 18, ಮಾರೇನಹಳ್ಳಿ, 5ನೇ ಬ್ಲಾಕ್, ಜಯನಗರ, ಬೆಂಗಳೂರು–560041.

96 ಬಿ. ಎಸ್. ಲೋಕೇಶ್, ನಂ. 85, 3ನೇ ಮುಖ್ಯ ರಸ್ತೆ, ಮಂಜುನಾಥ ನಗರ, ಬೆಂಗಳೂರು–560010.

97 ಎ. ಸಿ. ಶಿವಲಿಂಗಯ್ಯ, ನಂ. 858, 15ನೇ ಮುಖ್ಯ ರಸ್ತೆ, ಎಂ. ಸಿ. ಬಡಾವಣೆ, ಬೆಂಗಳೂರು–560040.

98 ಡಿ. ಎಲ್. ಚಂದ್ರಶೇಖರಯ್ಯ, ನಂ. 123, 4ನೇ ಮುಖ್ಯ ರಸ್ತೆ, ಚಾಮರಾಜ ಪೇಟೆ, ಬೆಂಗಳೂರು 560038.

(ಮುಂದುವರಿಯುತ್ತದೆ.)

LICFNCED TO POSTWITHOUT PRE PAYMENT LICENCE N
SIDDAGANGA MONTHLY Reg No. KRN C



ಶ್ರೀ ಸಿದ್ಧಲಿಂಗೇಶ್ವರ ಸ್ವಾಮಿ ಮುದ್ರಣಾಲಯ, ಶ್ರೀ ಸಿದ್ಧಗಂಗಾ ಕ್ಷೇತ್ರ.